ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹಮಾಲಿಕೆ

# ಅಜೀಜ್ ಸೇಠ್







ಪ್ರಕಟಣೆ :

**ಗ್ರಂಥಾಲಯ ಉಪ ಸಮಿತಿ**

ಕರ್ನಾಟಕ ವಿಧಾನ ಸಭೆ, ಸಚಿವಾಲಯ

ವಿಧಾನ ಸೌಧ, ಬೆಂಗಳೂರು - 560 001

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು - ಬರಹಮಾಲಿಕೆ

# ಅಜೀಜ್ ಸೇಟ್

ಹೆಚ್.ಕೆ. ಬಾಲಸೂರಿ




:ಪ್ರಕಟಣೆ:

ಗ್ರಂಥಾಲಯ ಉಪಸಮಿತಿ
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001

AZIZ SAIT : Prathibhavantha Samsadiya Patugala Baduku Baraha Malike (Eminent Parliamentarian Series) Written By H.K. Balasuri, Published By Karnataka Legislative Assembly Secretariat, Vidhana Soudha, Bangalore-01.

Pages-120+9

Rupees- 15



First Edition: August, 2002.

Number of Copies: 2,000

Printed and Designed by:
Government Printing Press,
Bangalore-01.

ಅಜೀಜ್ ಸೇಟ್: ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹಮಾಲಿಕೆ ಮೂಲ ಕೃತಿ: ಹೆಚ್.ಕೆ. ಬಾಲಸೂರಿ, ಪ್ರಕಟಣೆ : ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನ ಸೌಧ, ಬೆಂಗಳೂರು.

ಪುಟ ಸಂಖ್ಯೆ: 120+9

ಬೆಲೆ ರೂ: 15/-



ಮೊದಲನೆಯ ಮುದ್ರಣ: ಆಗಸ್ಟ್ 2002

ಪ್ರತಿಗಳು: 2,000

ಮುಖ ಪುಟ ವಿನ್ಯಾಸ ಮತ್ತು ಮುದ್ರಣ:
ಸರ್ಕಾರಿ ಮುದ್ರಣಾಲಯ,
ಬೆಂಗಳೂರು - 560001

# ಪೀಠಿಕೆ

ದೇಶದ ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದು ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರು ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರ ತಂದಿರುತ್ತಾರೆ. ಅವುಗಳಲ್ಲಿ ಡಾ: ಬಿ.ಆರ್. ಅಂಬೇಡ್ಕರ್, ಡಾ: ರಾಂಮನೋಹರ ಲೋಹಿಯಾ ಮತ್ತು ಶೇಕ್ ಮಹಮ್ಮದ್ ಅಬ್ದುಲ್ ಮತ್ತು ವಿ.ಕೆ. ಕೃಷ್ಣಮೆನನ್ ಮೊದಲಾದ ಗಣ್ಯರ ಬಗ್ಗೆ ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿದ್ದ ಕಿರುಹೊತ್ತಿಗೆಗಳನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ ರಾಜ್ಯದ ಸಂಸದೀಯ ಪಟುಗಳಾಗಿದ್ದ ಅನೇಕ ಮಹನೀಯರನ್ನು ಕುರಿತ ಕಿರುಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಲಾದ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿತ್ತು. ಈ ಉಪಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯಪಟುಗಳ ಮಾಲಿಕೆಯಲ್ಲಿ ಈಗಾಗಲೇ ಕೆಂಗಲ್ ಹನುಮಂತಯ್ಯ, ಶಾಂತವೇರಿ ಗೋಪಾಲಗೌಡ, ಎಸ್. ನಿಜಲಿಂಗಪ್ಪ, ವೈಕುಂಠ ಬಾಳಿಗ, ಕೆ.ಎಸ್. ನಾಗರತ್ನಮ್ಮ, ಜಿ.ವಿ. ಹಳ್ಳಿಕೇರಿ, ಡಿ. ದೇವರಾಜ ಅರಸು ಅವರುಗಳ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ. ಈಗ ಶ್ರೀ ಹೆಚ್.ಕೆ. ಬಾಲಸೂರಿ ಅವರು ರಚಿಸಿರುವ ಹಿರಿಯ ರಾಜಕೀಯ ಮುತ್ಸದ್ದಿ ಶ್ರೀ ಅಜೀಜ್ ಸೇಟ್ ಅವರ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಬಿ.ಎಲ್. ಶಂಕರ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಎಂ.ವಿ. ವೆಂಕಟಪ್ಪ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಅರಿಕೆ

ಕರ್ನಾಟಕ ರಾಜ್ಯ ವಿಧಾನಮಂಡಲದ ಗ್ರಂಥಾಲಯ ಉಪಸಮಿತಿಯು ರಾಜ್ಯದ ಶ್ರೇಷ್ಠ ಸಂಸದೀಯ ಪಟುಗಳನ್ನು ಅವರ ಚಟುವಟಿಕೆ, ಕಳಕಳಿ ಕುರಿತಂತೆ ಪುಸ್ತಕಗಳನ್ನು ಸಿದ್ಧಪಡಿಸುತ್ತಿರುವುದು ಒಂದು ಅತ್ಯುತ್ತಮ ಕಾರ್ಯ. ನೂತನವಾಗಿ ಆಯ್ಕೆಯಾದ ಶಾಸಕರಿಗೂ, ಸಾರ್ವಜನಿಕರಿಗೂ ತಮ್ಮ ಹಿರಿಯ ನಾಯಕರ ಗುಣಗಳನ್ನು, ಕಾರ್ಯವೈಖರಿಯನ್ನು ಸಮರ್ಥವಾಗಿ ಅರ್ಥೈಸಲು ಇದೊಂದು ಬೆಳಕಿಂಡಿ. ಇದಕ್ಕಾಗಿ ವಿಧಾನಮಂಡಲದ ಕಾರ್ಯದರ್ಶಿಯವರಿಗೆ ನನ್ನ ಅಭಿನಂದನೆ.

ಕರ್ನಾಟಕ ರಾಜ್ಯವು ರಾಜಕೀಯ ರಂಗಕ್ಕೆ ಹಲವಾರು ವಿಶಿಷ್ಟ ಪ್ರತಿಭಾನ್ವಿತರನ್ನು ನೀಡಿದೆ. ಶ್ರೀ ಕೆಂಗಲ್ ಹನುಮಂತಯ್ಯ, ಶಾಂತವೇರಿ ಗೋಪಾಲಗೌಡ, ಕಡಿದಾಳ ಮಂಜಪ್ಪ, ದೇವರಾಜ ಅರಸು, ಎಸ್. ನಿಜಲಿಂಗಪ್ಪ ಇನ್ನೂ ಹಲವಾರು ಪ್ರಮುಖರು ರಾಜ್ಯದ ಜನತೆಗೆ, ನಾಡಿಗೆ ಸಲ್ಲಿಸಿರುವ ಸೇವೆ ಅಪಾರ. ಇಂತಹ ಮಹನೀಯರ ಸಾಲಿಗೆ ನಿಲ್ಲಬಲ್ಲಂತಹ ವ್ಯಕ್ತಿತ್ವ ಶ್ರೀ ಅಜೀಜ್‌ಸೇಟ್‌ರವರದ್ದು.

ಶ್ರೀಮಂತರ ಕುಟುಂಬದಲ್ಲೇ ಜನಿಸಿದ್ದರೂ ತೀರಾ ಶೋಷಿತ ವರ್ಗದವರಲ್ಲಿ ಇವರು ತೋರಿಸಿದ ಕಳಕಳಿ ಅನನ್ಯ. ಹಿಂದುಳಿದ ಮುಸ್ಲಿಂ ಜನಾಂಗದ ನೈಜ ಪ್ರತಿನಿಧಿಯಾಗಿ ಮೂಡಿಬಂದ ಅಜೀಜ್‌ಸೇಟ್, ಸಾಮಾಜಿಕ, ಶೈಕ್ಷಣಿಕ ಹಾಗೂ ರಾಜಕೀಯ ರಂಗದಲ್ಲಿ ಸಲ್ಲಿಸಿರುವ ಸೇವೆ ಅಪರೂಪದ್ದು. ಧೃಢವ್ಯಕ್ತಿತ್ವದ ಈ ರಾಜಕಾರಣಿಯನ್ನು ಕುರಿತಾದ ಪುಸ್ತಕ ರಚನೆ ದೊರೆತಿದ್ದು ನನ್ನ ಭಾಗ್ಯ.

ಶ್ರೀ ಅಜೀಜ್‌ಸೇಟ್‌ರನ್ನು ಕುರಿತು ಪುಸ್ತಕ ರಚನೆಯ ಅವಕಾಶ ನನಗೆ ಲಭ್ಯವಾಗಿದ್ದು ಈ ಸಂಬಂಧ ಬೇಕಾದ ಅಗತ್ಯ ದಾಖಲೆ ಮತ್ತು ಮಾಹಿತಿಯನ್ನು ನೀಡಿ ಸಹಕರಿಸಿದ ವಿಧಾನಮಂಡಲದ ಕಾರ್ಯದರ್ಶಿ ಅವರ ಸಹ ಸಿಬ್ಬಂದಿಯವರಿಗೂ ನಾನು ಕೃತಜ್ಞನಾಗಿದ್ದೇನೆ. ಈ ಕಾರ್ಯದಲ್ಲಿ ಸಹಕರಿಸಿದ ಇತರರಿಗೂ ನನ್ನ ವಂದನೆಗಳು.

**ಬಾಲಸೂರಿ ಹೆಚ್.ಕೆ.**

ಬೆಂಗಳೂರು.

# ಪರಿವಿಡಿ

## ಭಾಗ-1

ಪುಟಸಂಖ್ಯೆ



## ಭಾಗ-2

ಶಾಸನ ಸಭೆಯಲ್ಲಿ ಅಜೀಜ್ ಸೇಟ್

ವಿಧಾನಸಭೆಯಲ್ಲಿ ಮಾಡಿದ ಭಾಷಣಗಳು

## ಭಾಗ - 1

## ವ್ಯಕ್ತಿ ಚಿತ್ರ

ಕರ್ನಾಟಕ ರಾಜ್ಯದ ಅತಿವರ್ಣರಂಜಿತ ರಾಜಕಾರಣಿಗಳ ಪೈಕಿ ಶ್ರೀ. ಅಜೀಜ್‌ಸೇಟ್ ಒಬ್ಬರು. ತೀರಾ ಹಿಂದುಳಿದ ಮುಸ್ಲಿಂ ಜನಾಂಗದಿಂದ ವಿಧಾನಸಭೆ, ಪರಿಷತ್‌ಗೆ ಆರಿಸಿ ಬಂದು ಎಲ್ಲಾ ವ್ಯಕ್ತಿಗಳ, ಎಲ್ಲಾ ಜಾತಿ, ಧರ್ಮದವರ ಪ್ರೀತಿ ವಿಶ್ವಾಸ ಗಳಿಸಿಕೊಂಡು ಬೆಳೆದಿದ್ದು ಇವರ ವೈಶಿಷ್ಟ್ಯ.

ಹಿನ್ನೆಲೆ :-

ಅಜೀಜ್‌ಸೇಟ್‌ರದ್ದು ಶ್ರೀಮಂತ ಕುಟುಂಬ. ಪಾಕಿಸ್ತಾನದ ಸಿಂಧ್ ಪ್ರಾಂತ್ಯದವರು. 350 ವರ್ಷಗಳ ಹಿಂದೆ ಮತಾಂತರ ಹೊಂದಿ ಮುಸ್ಲಿಂ ಜನಾಂಗಕ್ಕೆ ಸೇರಿದವರು. ಸಿಂಧ್ ಪ್ರಾಂತ್ಯದಿಂದ ಗುಜರಾತ್‌ನ ಕಛ್ ಪ್ರದೇಶದಲ್ಲಿ ಬಂದು ನೆಲೆಸಿ, ನಂತರ ದಕ್ಷಿಣದೆಡೆಗೆ ದೋಣಿಗಳಲ್ಲಿ ಹೊರಟಾಗ ಇವರ ಮುತ್ತಾತ ಇದ್ದ ದೋಣಿ ಕಲ್ಲಿಕೋಟೆಯ ಸಮೀಪ ದುರಂತಕ್ಕೀಡಾಯಿತು. ನಂತರ ಇವರ ಮುತ್ತಾತ ಕಲ್ಲಿಕೋಟೆಯಲ್ಲಿ ಆಶ್ರಯ ಪಡೆದು ನಂತರ ಕೊಡಗು ಸೇರಿದರು. ಅಲ್ಲಿ ಗಂಧದಕೋಠಿಯ ಮೇಲ್ವಿಚಾರಕರಾಗಿ ನಿಯುಕ್ತಿಗೊಂಡರು. ಅಲ್ಲಿಂದ ಮಹರಾಜರ ಕೃಪಾಶ್ರಯದಿಂದ, ಮೈಸೂರಿನಲ್ಲಿ ಬಹು ಸಾಮಗ್ರಿ ಮಳಿಗೆಯೊಂದನ್ನು ಆರಂಭಿಸಿದರು. ಆ ಕಾಲದಲ್ಲಿ ಬಹಳ ಪ್ರಸಿದ್ಧವಾಗಿದ್ದ ಅಬ್ಬಾ ಅಬ್ದುಲ್ ಶಕೂರ್ ಸೇಟ್ ಮತ್ತು ಮಕ್ಕಳು ಎಂಬ ಬಹು ಸಾಮಗ್ರಿಮಳಿಗೆ ಬಹುಷಃ ಮೈಸೂರಿನಲ್ಲಿ ಆರಂಭವಾದ ಮೊದಲ ಬಹು ಸಾಮಗ್ರಿ ಮಳಿಗೆ. ನಂತರ ಇದರ ಜವಾಬ್ದಾರಿ ಅಜೀಜ್‌ಸೇಟ್ ಅವರ ತಂದೆ ಅಬ್ದುಲ್ ಸತ್ತಾರ್‌ಸೇಟ್‌ರ ಪಾಲಿಗೆ ಬಂತು. ಮೈಸೂರು ಮಹಾರಾಜರ ಪುತ್ರರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಒಡನಾಟದ ಭಾಗ್ಯ ಶ್ರೀ ಅಜೀಜ್‌ಸೇಟ್‌ರ ಪಾಲಿಗೆ. ಇದೇ ಅಬ್ದುಲ್ ಸತ್ತಾರ್‌ಸೇಟ್ ಮತ್ತು ಹೂರ್‌ಭಾಯಿಯವರ ಪ್ರಥಮ ಪುತ್ರನಾಗಿ 1921 ಜನವರಿ 1 ರಂದು ಮೈಸೂರಿನಲ್ಲಿ ಜನಿಸಿದ ಅಜೀಜ್‌ಸೇಟ್ ಹೆಚ್ಚು ಕಲಿತವರಲ್ಲ. ಮೈಸೂರಿನ ಗುಡ್‌ಶೆಪರ್ಡ್ ಕಾನ್ವೆಂಟ್‌ನಲ್ಲಿ ತಮ್ಮ ಶಾಲಾ ಶಿಕ್ಷಣವನ್ನು ಆರಂಭಿಸಿದ ಅಜೀಜ್‌ಸೇಟ್ ನಂತರ ಆಂಗ್ಲೋ-ಹಿಂದೂಸ್ತಾನಿ ಶಾಲೆಯಲ್ಲಿ ಉರ್ದು ಶಿಕ್ಷಣಕ್ಕಾಗಿ ಸೇರಿದರು. ಏಳನೇ ತರಗತಿಯನ್ನು ಮುಗಿಸಿದ ನಂತರ ವ್ಯಾಪಾರಕ್ಕಾಗಿ ತಮ್ಮದೇ ಅಂಗಡಿಯನ್ನು ಸೇರಿದರು. ಅವಿಭಕ್ತ ಕುಟುಂಬದಿಂದ ಬಂದ ಅಜೀಜ್‌ಸೇಟ್‌ರದ್ದು ಮನೆಯ ಹಿರಿತನದ ಜವಾಬ್ದಾರಿ. 1946ರ ತನಕ ಅಂಗಡಿಯಲ್ಲಿ ವ್ಯಾಪಾರದ ಮತ್ತು ತಮ್ಮ ಪಾಡಿಗೆ ತಾವು ಎಂಬಂತ್ತಿದ್ದ ಅಜೀಜ್‌ಸೇಟ್‌ರದ್ದು ಅವರ ಮಾತಿನಲ್ಲಿ ಹೇಳುವಂತೆ ರಾಜಕೀಯಕ್ಕೆ ಬಲವಂತವಾಗಿ ದೂಡಲಾಯಿತು. 1948ರಲ್ಲಿ ಆಗಿನ ಊಟಿ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರ ಮಗಳಾದ ಶ್ರೀಮತಿ ಜುಜೀದಾಬಾಯಿಯವರನ್ನು ಮದುವೆಯಾದರು.

## ರಾಜಕೀಯ ಪ್ರವೇಶ

ಮೈಸೂರು ನಗರ ಸಭೆಗೆ ಮಂಡಿಮೊಹಲ್ಲಾ ಕ್ಷೇತ್ರದಿಂದ ಸ್ಪರ್ಧಿಸಿದ್ದ ಮಹಮದ್ ಷರೀಫ್ ಎಂಬ ವಕೀಲರ ಪರವಾಗಿ ಪ್ರಚಾರಕ್ಕಾಗಿ ಇಳಿದರು. ಈ ಚುನಾವಣೆಯಲ್ಲಿ ಮಹಮದ್ ಷರೀಫ್ ವಿರುದ್ಧ ಸ್ಪರ್ಧಿಸಿದ್ದು ಟಿ. ಮರಿಯಪ್ಪ ಚುನಾವಣೆಯಲ್ಲಿ ಷರೀಫ್ ಸೋತರು. ಆದರೆ ಪ್ರಚಾರದಲ್ಲಿ ಮುಂದಾಳತ್ವ ವಹಿಸಿದ್ದ ಅಜೀಜ್‌ಸೇಟ್‌ಗೆ ರಾಜಕೀಯದ ಒಳಹೊರಗು ಪರಿಚಯವಾಯಿತು. ಮರಿಯಪ್ಪನವರ ಸಂಘಟಿತ ಹೋರಾಟವನ್ನು ಗಮನಿಸಿದ್ದ ಅಜೀಜ್‌ಸೇಟ್ ಸಂಘಟಿತ ಹೋರಾಟಕ್ಕೆ ಹೆಚ್ಚಿನ ಒತ್ತು ನೀಡಿದರು. ಚುನಾವಣಾ ಪ್ರಚಾರ ಸಂದರ್ಭದಲ್ಲಿ ಬೀಡಿ ಕಾರ್ಮಿಕರ ಬವಣೆಯನ್ನು ಗಮನಿಸಿದ್ದ ಅಜೀಜ್‌ಸೇಟ್ ಅವರನ್ನು ಸಂಘಟಿಸಲು ನಿರ್ಧರಿಸಿದರು. ಈ ಸಂದರ್ಭದಲ್ಲಿ ಬೀಡಿ ಕಾರ್ಮಿಕರ ಬವಣೆಯನ್ನು ಕಣ್ಣಾರೆ ಕಂಡ ಅಜೀಜ್‌ಸೇಟ್ ಬೀಡಿ ಕಾರ್ಮಿಕರ ಪರ ಹೋರಾಟಕ್ಕೆ ನಿಂತರು. ಪ್ರಾರಂಭಿಕವಾಗಿ ಬೀಡಿ ಕಾರ್ಮಿಕರಲ್ಲಿ ಮನೆ ಮಾಡಿದ್ದ ಒಡಕನ್ನು ನಿವಾರಿಸಲು ಗಮನ ಹರಿಸಿದರು. ಆ ತನಕ ಐದಾರು ಕಾರ್ಮಿಕ ಸಂಘಟನೆಯಡಿ ಚೂರಾಗಿದ್ದ ಬೀಡಿ ಕಾರ್ಮಿಕರು ಅಜೀಜ್‌ಸೇಟ್‌ರ ನಾಯಕತ್ವದಲ್ಲಿ ವಿಶ್ವಾಸವಿರಿಸಿ ತಮ್ಮೆಲ್ಲಾ ಭಿನ್ನಾಭಿಪ್ರಾಯವನ್ನು ಬದಿಗೊತ್ತಿ ನಿಂತರು. ಪರಿಣಾಮ ಅಜೀಜ್‌ಸೇಟ್‌ರ ಅಧ್ಯಕ್ಷತೆಯಲ್ಲಿ ಮೈಸೂರು ಜಿಲ್ಲಾ ಬೀಡಿ ಕಾರ್ಮಿಕರ ಫೆಡರೇಷನ್ 1952ರಲ್ಲಿ ಅಸ್ತಿತ್ವಕ್ಕೆ ಬಂತು. ಆ ತನಕ 1,000 ಬೀಡಿ ಕಟ್ಟಲು ಸಿಗುತ್ತಿದ್ದ ಕೂಲಿ ನಗರದ ಪ್ರದೇಶದಲ್ಲಿ 1-40 ರೂ.ಯಾದರೆ ಗ್ರಾಮಾಂತರ ಪ್ರದೇಶದಲ್ಲಿ ಕೇವಲ 80 ಪೈಸೆಯಿಂದ 1-00 ರೂ. ಮಾತ್ರ. ಈ ಅಸಮ ವೇತನದ ಪರಿಷ್ಕರಣೆಯ ಗುರಿಯನ್ನು ಹೊಂದಿದ ಸೇಟರು ತಾವೇ ವಿನೂತನವಾಗಿ ಸತ್ಯಾಗ್ರಹ ಆರಂಭಿಸಿದರು. ಕಾರ್ಮಿಕರಿಗೆ ಹೆಚ್ಚಿನ ತೊಂದರೆಯಾಗದಂತೆ, ತಾವೇ ಕಾರ್ಮಿಕರ ಪರವಾಗಿ ಸತ್ಯಾಗ್ರಹವನ್ನು ಆರಂಭಿಸಿದರು. ಪ್ರಾರಂಭದಲ್ಲಿ ಬೀಡಿ ಮಾಲೀಕರು ಇವರಿಗೆ ಬೆಲೆ ನೀಡಲಿಲ್ಲ. ದಿನಕಳೆದಂತೆ ಮಾಲೀಕರ ಹಮ್ಮು ಕರಗಿತು. ಸೇಟ್‌ರ ಹೋರಾಟಕ್ಕೆ ಬೆಲೆ ಬಂತು. ಗ್ರಾಮೀಣ ಪ್ರದೇಶದ ಕಾರ್ಮಿಕರಿಗೂ ನಗರ ಪ್ರದೇಶದ ಕಾರ್ಮಿಕರಷ್ಟೆ ವೇತನ ಲಭ್ಯವಾಯಿತು. ಬೀಡಿ ಕಾರ್ಮಿಕರ ಹೋರಾಟಕ್ಕೆ ಸಂಘಟನೆಗೆ ಹೊಸ ಚೈತನ್ಯ ಬಂತು. ಈ ಹೋರಾಟದ ಫಲವಾಗಿ ಕೇಂದ್ರ ಸರ್ಕಾರ ಬೀಡಿ ಕಾರ್ಮಿಕರ ಕಲ್ಯಾಣನಿಧಿಯನ್ನು ಆರಂಭಿಸಿತು. ಈ ಮೂಲಕ ಸುಮಾರು 4,00,000 ದಷ್ಟು ಅಸಂಘಟಿತ ಬೀಡಿ ಕಾರ್ಮಿಕರು ಉಚಿತ ವೈದ್ಯಕೀಯ ಸೌಲಭ್ಯ, ಮಕ್ಕಳಿಗೆ ವಿದ್ಯಾರ್ಥಿವೇತನದಂತಹ ಹಲವಾರು ಅಂಶಗಳಿಂದ ಪ್ರಯೋಜನ ಪಡೆದರು. ದೇಶದಾದ್ಯಂತ ಬೀಡಿ ಕಾರ್ಮಿಕರು ತಮ್ಮ ಹೋರಾಟಕ್ಕೆ ಸ್ಫೂರ್ತಿ ನೀಡಿದ ಸೇಟ್‌ರನ್ನು ಕೃತಜ್ಞತೆಯಿಂದ ಕಂಡರು.

## ಚುನಾವಣಾ ಕಣದಲ್ಲಿ

1953ರಲ್ಲಿ ಮೈಸೂರು ನಗರ ಸಭೆಗೆ ಚುನಾವಣೆ ನಡೆಯಿತು. ಮಂಡಿಮೊಹಲ್ಲ ಕ್ಷೇತ್ರದಿಂದ ಅಜೀಜ್‌ಸೇಟರು ಸ್ಪರ್ಧಿಸಿದರು. ಸಂಘಟನೆಯ ಜವಾಬ್ದಾರಿ ಹೊತ್ತವರು ಬೀಡಿ ಕಾರ್ಮಿಕರೇ. ಈ ಚುನಾವಣೆಯಲ್ಲಿ ಪ್ರಚಂಡ ಗೆಲುವು ಸಾಧಿಸಿದ ಅಜೀಜ್‌ಸೇಟ್‌ರು ನಗರಸಭಾ ಸದಸ್ಯರಾಗಿ ಮೈಸೂರು ನಗರಸಭೆ ಪ್ರವೇಶಿಸಿದರು. ಈ ವೇಳೆಗಾಗಲೇ ಹೊರ ಜಿಲ್ಲೆಗಳಲ್ಲೂ ಪರಿಚಿತರಾಗಿದ್ದರು.

ಕೇವಲ ಕಾರ್ಮಿಕರ ಹೋರಾಟವಲ್ಲ. ಅಶಿಕ್ಷಿತ ಸಮಾಜಕ್ಕೆ ಶಿಕ್ಷಣದ ಅಗತ್ಯವನ್ನು ಮನಗಂಡವರು ಶ್ರೀ ಅಜೀಜ್‌ಸೇಟ್. ಆದ್ದರಿಂದ ತಮ್ಮ ಮುಸ್ಲಿಂ ಬಾಂಧವರ ಶೈಕ್ಷಣಿಕ ಮಟ್ಟ ಸುಧಾರಿಸಲು ಕ್ರಮ ಕೈಗೊಂಡರು. ಮಜ್ಲಿಸ್-ಇ-ರಿಫಾಹುಲ್ ಮುಸ್ಲಿಮಿನ್ ಶಿಕ್ಷಣ ಟ್ರಸ್ಟನ್ನು 1960ರಲ್ಲಿ ಇವರ ತಂದೆಯವರಾದ ಶ್ರೀ ಅಬ್ದುಲ್ ಸತ್ತಾರ್‌ಸೇಟ್‌ರ ಅಧ್ಯಕ್ಷತೆಯಲ್ಲಿ ಆರಂಭಿಸಲಾಯಿತು. 1961ರಿಂದ ಅದರ ಅಧ್ಯಕ್ಷತೆ ಅಜೀಜ್‌ಸೇಟ್‌ರ ಪಾಲಿಗೆ ಬಂತು. ಇದೀಗ ಈ ಶಿಕ್ಷಣ ಸಂಸ್ಥೆ ಬೆಳೆದು ನಿಂತಿದೆ. ಸುಮಾರು ಹದಿಮೂರಕ್ಕೂ ಹೆಚ್ಚು ಶೈಕ್ಷಣಿಕ ವಿಭಾಗಗಳನ್ನು ಈ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ ನಡೆಸಲಾಗುತ್ತಿದೆ. ಮಕ್ಕಳಿಗೆ ಪ್ರಾಥಮಿಕ ಶಾಲೆ, ಹೆಣ್ಣು ಮತ್ತು ಗಂಡುಮಕ್ಕಳಿಗೆ ಪ್ರತ್ಯೇಕ ಪ್ರೌಢಶಾಲೆಗಳು, ಜೂನಿಯರ್ ಕಾಲೇಜುಗಳು, ಹೆಣ್ಣು ಮಕ್ಕಳಿಗೆ ಶಿಕ್ಷಣ ತರಬೇತಿ ಕೇಂದ್ರ, ಡಿ ಫಾರ್ಮ ಕಾಲೇಜು, ಬಿ ಫಾರ್ಮ ಕಾಲೇಜುಗಳೊಂದಿಗೆ ದಂತ ವೈದ್ಯಕಾಲೇಜು, ವೃತ್ತಿ ಶಿಕ್ಷಣ ತರಬೇತಿ, ಹೀಗೆ ಹಲವಾರು ಶಾಲಾ ಕಾಲೇಜುಗಳು ಈ ಶಿಕ್ಷಣ ಸಂಸ್ಥೆಯಿಂದ ನಿರ್ವಹಿಸಲ್ಪಡುತ್ತಿದೆ.

## ಶಾಸನ ಸಭೆಯಲ್ಲಿ

1960ರಲ್ಲಿ ನಡೆದ ವಿಧಾನ ಪರಿಷತ್ತಿಗೆ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಯಾಗಿ ಮೈಸೂರು, ಮಂಡ್ಯ, ಹಾಸನ ಮತ್ತು ಕೊಡಗು ಜಿಲ್ಲೆಗಳ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಗಳ ಪರವಾಗಿ ಸ್ಪರ್ಧಿಸಿ ಆಯ್ಕೆಯಾದರು. ಈ ಸ್ಥಳೀಯ ಸಂಸ್ಥೆಗಳ ಮುಖಾಂತರ ಪರಿಷತನ್ನು ಪ್ರವೇಶಿಸಿದ ಮೊದಲ ಮುಸ್ಲಿಂ ಸಮುದಾಯದ ವ್ಯಕ್ತಿಯೆಂದು ಪರಿಗಣಿತರಾದರು.

ಚಟುವಟಿಕೆಯ ಸಂಘಟನೆ, ಬೀಡಿ ಕಾರ್ಮಿಕರ ಆತ್ಮಗೌರವದ ರಕ್ಷಣೆ ಮತ್ತು ಇವರ ಗಮನ. ಕೇವಲ 1-40 ರೂ. ಯನ್ನು ಕೂಲಿಯಾಗಿ ಪಡೆಯುತ್ತಿದ್ದ ಬೀಡಿ ಕಾರ್ಮಿಕ ಇಂದು ಪ್ರತಿ 1,000 ಬೀಡಿ ಕಟ್ಟಲು ಪಡೆಯುವ ಕೂಲಿ ರೂ. 55. ಆರ್ಥಿಕವಾಗಿ ಸಾಕಷ್ಟು ಸುಧಾರಿಸಿದ ಪರಿಸ್ಥಿತಿ. ಈ ಆರ್ಥಿಕ ಪರಿಸ್ಥಿತಿಯ ಸುಧಾರಣೆಯ ನಂತರ ಕಾರ್ಮಿಕರಿಗೆ ವಸತಿ ನೀಡುವತ್ತ ಸೇಟ್ ಗಮನಹರಿಸಿದರು. ಅದರ ಫಲವಾಗಿ ಆರಂಭ ಬೀಡಿ ಕಾರ್ಮಿಕರ ಸಹಕಾರ ಗೃಹ ನಿರ್ಮಾಣ ಸೊಸೈಟಿ. ಈ ಮುಖಾಂತರ ಕಾರ್ಮಿಕರಿಗೆ ಮನೆ ನಿರ್ಮಾಣದಲ್ಲಿ ರೂ. 3,000-00 ಗಳ ಸಹಾಯಧನ ನೀಡಲಾಯಿತು. ಮೈಸೂರಿನ ಉದಯಗಿರಿ

ಬಡಾವಣೆಯಲ್ಲಿ 1,000 ವಸತಿ ನಿರ್ಮಾಣ ಕಾರ್ಯ ಆರಂಭವಾಯಿತು. ಮಾಜಿ ಪ್ರಧಾನಿ ರಾಜೀವ್‌ಗಾಂಧಿಯವರು ಇವರ ಶಿಲಾನ್ಯಾಸ ನೆರವೇರಿಸಿದರು. ಶೀಘ್ರವಾಗಿ ತಲೆಯೆತ್ತಿದ 1,000 ಗೃಹಗಳ ಕಾಲೋನಿಗೆ ಅಜೀಜ್‌ಸೇಟ್ ನಗರವೆಂದು ರಾಜೀವ್‌ಗಾಂಧಿ ನಾಮಕರಣ ಮಾಡಿದರು. ಮನೆಗಳೊಂದಿಗೆ ಸುಸಜ್ಜಿತ ಆಸ್ಪತ್ರೆ, ಶಾಲೆ, ಮಸೀದಿ, ಮುಂತಾದ ಕಟ್ಟಡಗಳ ನಿರ್ಮಾಣವೂ ಆರಂಭವಾಯಿತು. ಅಖಿಲ ಭಾರತ ಬೀಡಿ ಕಾರ್ಮಿಕರ ಕಲ್ಯಾಣ ನಿಧಿಯಿಂದ ಬೀಡಿ ಕಾರ್ಮಿಕರಿಗಾಗಿಯೇ 50 ಹಾಸಿಗೆಗಳ ಆಸ್ಪತ್ರೆ ದೇಶದಲ್ಲೇ ಮೊದಲನೆಯದಾಗಿ ಆರಂಭಿಸಲ್ಪಟ್ಟಿತ್ತು. ಸಹಾಯಧನ ಮೊತ್ತ ನಿರ್ಮಾಣ ವೆಚ್ಚ ಏರಿದಂತೆ ಹೆಚ್ಚಾಗಿ ರೂ. 3,000 ರಿಂದ 5,000 ಆದು ಈಗ ರೂ. 10,000-00ಗಳ ಸಹಾಯಧನ ನೀಡಿಕೆಯಾಗುತ್ತಿದ್ದು, ಬಹುಪಾಲು ಬೀಡಿ ಕಾರ್ಮಿಕರು ತಮ್ಮ ಸಂಪಾದನೆಯಿಂದ ಗಳಿಸಿದ ಹಣದಿಂದ ಸಾಲವನ್ನು ತೀರಿಸಿ ಮನೆಯನ್ನು ತಮ್ಮದೇ ಮಾಡಿಕೊಂಡಿದ್ದಾರೆ. ಅದರೊಂದಿಗೆ ಪ್ರತಿ ಮನೆಯಲ್ಲೂ ದೀಪ, ನೀರಿನ ಸೌಕರ್ಯವಿದ್ದು ಪ್ರತಿ ಕುಟುಂಬವು ದೂರದರ್ಶನ ಸಂಪರ್ಕ ಪಡೆದಿದೆ. ಸಾಮಾಜಿಕವಾಗಿ ತೀರಾ ನಿಕೃಷ್ಟವಾಗಿದ್ದ ಕಾರ್ಮಿಕರು ಇಂದು ಸ್ವಂತಿಕೆಯಿಂದ ಹೆಮ್ಮೆಯಿಂದ ಜೀವಿಸುವಂತೆ ಆಗಿದೆ. ಅಜೀಜ್‌ಸೇಟ್ ನಗರದ ಉದ್ಘಾಟನೆಯ ನಂತರ ಮೈಸೂರಿನ ವಿವಿಧ ಬಡಾವಣೆಗಳಲ್ಲಿ 300, 200, 100, 150 ಗೃಹಗಳ ನಿರ್ಮಾಣ, ಆ ಮುಖಾಂತರ ವಿವಿಧ ಬಡಾವಣೆಗಳಲ್ಲಿ ನೆಲಸಿರುವ ಕಾರ್ಮಿಕರಿಗೆ ವಸತಿ ನಿರ್ಮಾಣದ ಕಾರ್ಯ ಆರಂಭಗೊಂಡಿದ್ದು ಈಗಾಗಲೇ 3,000 ಮನೆಗಳು ನಿರ್ಮಾಣಗೊಂಡು ಕಾರ್ಮಿಕರಿಗೆ ಆಶ್ರಯವನ್ನು ನೀಡಿದೆ.

1967ರಲ್ಲಿ ನಡೆದ ವಿಧಾನಸಭಾ ಚುನಾವಣೆಗೆ ಮೈಸೂರಿನ ನರಸಿಂಹರಾಜಕ್ಷೇತ್ರದಿಂದ ಸಮಾಜವಾದಿ ಪಕ್ಷದ ಪರವಾಗಿ ಸ್ಪರ್ಧಿಸಿದರು ಮತ್ತು ಜನಪ್ರಿಯತೆಯ ತುತ್ತ ತುದಿಯಲ್ಲಿದ್ದ ಅವರು ನಿರಾಯಾಸ ಗೆಲುವು ಸಾಧಿಸಿ ಶಾಸನಸಭೆಗೆ ತಮ್ಮ ಪಾದಾರ್ಪಣೆ ಮಾಡಿದರು. 1967ರಲ್ಲಿ ಈ ವಿಧಾನಸಭೆಗೆ ಪ್ರವೇಶಿಸಿದ ಅಜೀಜ್‌ಸೇಟ್ ಸತತ 18 ವರ್ಷಗಳ ಕಾಲ ಈ ಸಭೆಯಲ್ಲಿ ನರಸಿಂಹರಾಜ ಕ್ಷೇತ್ರವನ್ನು ಪ್ರತಿನಿಧಿಸಿದ್ದರು.

1984ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಟಿಕೇಟ್‌ನಿಂದ ಧಾರವಾಡ ದಕ್ಷಿಣ ಕ್ಷೇತ್ರದಿಂದ ಸ್ಪರ್ಧಿಸಿ, ವಿಜಯಶಾಲಿಯಾಗಿ ಲೋಕಸಭೆಗೆ ಪ್ರವೇಶಿಸಿದರು. ಕಾಶ್ಮೀರದ ಸಮಸ್ಯೆಗೆ ಪರಿಹಾರ ಕಂಡು ಹಿಡಿಯುವಲ್ಲಿ ಶ್ರೀ ರಾಜೀವ್‌ಗಾಂಧಿಯವರೊಡನೆ ಸಹಕರಿಸಿದರು. ಕಾಂಗ್ರೆ ಪಕ್ಷದ ಅಖಿಲ ಭಾರತದ ಅಲ್ಪ ಸಂಖ್ಯಾತರ ವಿಭಾಗದ ಸಂಚಾಲಕರಾಗಿ 1984-89 ರವರೆಗೆ ಸೇವೆ ಸಲ್ಲಿಸಿದರು. ಸಮುದಾಯಕ್ಕೆ ನೀಡಿದ ಅಪ್ರತಿಮ ಸೇವೆಯನ್ನು ಗಮನಿಸಿದ ಪಂಜಾಬಿನ ಸಿಖ್‌ಬ್ರದರ್ಸ್ ಸಂಸ್ಥೆ 1988ರಲ್ಲಿ ತನ್ನ ಪ್ರತಿಷ್ಠಿತ ಶಿರೋಮಣಿ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಅಂದಿನ ಲೋಕ ಸಭಾಧ್ಯಕ್ಷರಾದ ಶ್ರೀ ಬಲರಾಂ ಜಾಖಡ್ ಈ ಪ್ರಶಸ್ತಿಯನ್ನು ಶ್ರೀ ಸೇಟರಿಗೆ ನೀಡಿದರು. ನಂತರ 1989ರಲ್ಲಿ ನಡೆದ ರಾಜ್ಯ

ವಿಧಾನ ಸಭಾ ಚುನಾವಣೆಗೆ ನರಸಿಂಹರಾಜ ಕ್ಷೇತ್ರದಿಂದ ಸ್ಪರ್ಧಿಸಿ, ಮರು ಆಯ್ಕೆಗೊಂಡರು. ಶ್ರೀ ದೇವರಾಜ ಅರಸು, ಶ್ರೀ ರಾಮಕೃಷ್ಣಹೆಗಡೆ, ಶ್ರೀ ವೀರೇಂದ್ರ ಪಾಟೀಲ್, ಶ್ರೀ ಬಂಗಾರಪ್ಪನವರ ಸಂಪುಟಗಳಲ್ಲಿ ಸಾರಿಗೆ, ಆಹಾರ ಮತ್ತು ನಾಗರೀಕ ಸರಬರಾಜು, ವಕ್ಫ್, ಕಾರ್ಮಿಕ, ಕೈಗಾರಿಕೆಯಂತಾ ಪ್ರಮುಖ ಖಾತೆಗಳಲ್ಲಿ ಕ್ಯಾಬಿನೆಟ್ ದರ್ಜೆ ಸಚಿವರಾಗಿ ಸೇವೆ ಸಲ್ಲಿಸಿದರು.

## ಸಾಮಾಜಿಕ ರಂಗದಲ್ಲಿ

ಬೀಡಿ ಕಾರ್ಮಿಕರ ಹಿತರಕ್ಷಣೆಯೊಂದಿಗೆ ತಮ್ಮ ರಾಜಕೀಯ ಜೀವನವನ್ನು ಆರಂಭಿಸಿದ ಶ್ರೀ ಅಜೀಜ್‌ಸೇಟ್ ತಮ್ಮ ರಾಜಕೀಯ ಅವಧಿಯೊಂದಿಗೆ ಸಾಮಾಜಿಕ ಕಳಕಳಿಯನ್ನು ಬೆಳೆಸಿಕೊಂಡು ಬಂದರು. ಮೈಸೂರು ಜಿಲ್ಲಾ ಬೀಡಿ ಕಾರ್ಮಿಕರ ಫೆಡರೇಷನ್ ಅವರು ಆರಂಭಿಸಿದ ಮೊದಲ ಸಾಮಾಜಿಕ ಸಂಘಟನೆ ತಮ್ಮ ಸೇವಾವಧಿಯಲ್ಲಿ ಹಲವಾರು ಸಂಘಟನೆಗಳ ಜೊತೆ ಅಜೀಜ್‌ಸೇಟ್ ಸಂಪರ್ಕವಿರಿಸಿಕೊಂಡರು. ಅವುಗಳು

| | | |
|---|---|---|
| ಕಾರ್ಯದರ್ಶಿ | : | ಜಮಾಯಿಲ್-ಉಲ್-ಉಲ್ಮಾ ಮೈಸೂರು. |
| ಅಧ್ಯಕ್ಷರು | : | ಬೀಡಿ ಕಾರ್ಮಿಕರ ಫೆಡರೇಷನ್ ಮೈಸೂರು. |
| ಅಧ್ಯಕ್ಷರು | : | ಬೆಂಗಳೂರು ಜಿಲ್ಲಾ ಬೀಡಿ ಕಾರ್ಮಿಕರ ಫೆಡರೇಷನ್. |
| ಅಧ್ಯಕ್ಷರು | : | ಬಿ.ಟಿ. ಅಕ್ಕಿ ಮತ್ತು ಎಣ್ಣೆ ಗಿರಣಿ ಕಾರ್ಮಿಕ ಸಂಘ. |
| ಸದಸ್ಯರು | : | ಕಾರ್ಮಿಕ ಸಲಹಾ ಸಮಿತಿ. |
| ಸದಸ್ಯರು | : | ಕಾರ್ಮಿಕ ನಿರ್ವಹಣೆ ಮತ್ತು ಸ್ಥಾಯಿ ಸಮಿತಿ |
| ಸದಸ್ಯರು | : | ಕನಿಷ್ಠ ವೇತನ ಮಂಡಲಿ (ಹೊಗೆಸೊಪ್ಪು ಮತ್ತು ಬೀಡಿ ಉದ್ಯಮ). |

**ಸ್ಥಾಪಕ ಅಧ್ಯಕ್ಷರು:** ಕರ್ನಾಟಕ ವಕ್ಫ್ ಡೆವಲಪ್‌ಮೆಂಟ್ ಕಾರ್ಪೊರೇಷನ್, ಲಿ. ಇದರೊಂದಿಗೆ ಮುಸ್ಲಿಂ ಜನಾಂಗದ ಅಭಿವೃದ್ಧಿಯ ಗಮನ ಶ್ರೀ ಸೇಟರದ್ದು. 1971ರಲ್ಲಿ ಪ್ರಥಮವಾಗಿ ಕರ್ನಾಟಕ ಮುಸ್ಲಿಂ ಸಮುದಾಯದವರ ಸಂಘಟನಾ ಸಭೆಯನ್ನು ನಡೆಸಿದರು. ಶ್ರೀರಂಗಪಟ್ಟಣದಲ್ಲಿ ಟಿಪ್ಪುಸುಲ್ತಾನ್ ಜನ್ಮ ದ್ವಿಶತಾಬ್ಧಿಯನ್ನು ತಮ್ಮ ಅಧ್ಯಕ್ಷತೆಯಲ್ಲಿ ನಡೆಸಿದರು. ಈ ಸಂದರ್ಭದಲ್ಲಿ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರನ್ನು ಶ್ರೀರಂಗಪಟ್ಟಣಕ್ಕೆ ಬರಮಾಡಿಸಿ, ಅವರಿಗೆ ಟಿಪ್ಪು ಸುಲ್ತಾನ್ ಸ್ಮಾರಕವಾಗಿ ಅಂಚೆ ಚೀಟಿಯನ್ನು ಬಿಡುಗಡೆ ಮಾಡಿಸಿದರು. ಶ್ರೀರಂಗಪಟ್ಟಣದಲ್ಲಿ ಟಿಪ್ಪುಸುಲ್ತಾನ್ ವಕ್ಫ್ ಎಸ್ಟೇಟನ್ನು ಆರಂಭಿಸಿ, ಹತ್ತು ವರ್ಷಗಳ ಕಾಲ ಅದರ ಅಧ್ಯಕ್ಷರಾಗಿದ್ದರು. ಅಲ್ಪಸಂಖ್ಯಾತರಿಗೆ ಕಾಲೇಜು, ವೈದ್ಯಕೀಯ ಕಾಲೇಜು, ದಂತವೈದ್ಯ ಕಾಲೇಜುಗಳ ಆರಂಭಕ್ಕೆ ಪರವಾನಗಿ ನೀಡುವಲ್ಲಿ ಸಹಕಾರಿಯಾದರು. ಹತ್ತು ಹಲವು ಮುಖಗಳಲ್ಲಿ ಸಾಮಾಜಿಕ ಸೇವೆ, ರಾಜಕೀಯ ಸೇವೆಯಲ್ಲಿ ಜೊತೆಜೊತೆಯಾಗಿ ಕಾರ್ಯನಿರ್ವಹಿಸಿದ ಸೇಟ್‌ರದ್ದು ಅಪರೂಪದ ವ್ಯಕ್ತಿತ್ವ.

## ಭಾಗ-2

## ಶಾಸನ ಸಭೆಯಲ್ಲಿ ಅಜೀಜ್‌ಸೇಟ್

ಅಜೀಜ್‌ಸೇಟ್ ಶಾಸನ ಸಭೆಯನ್ನು ಪ್ರವೇಶಿಸಿದ್ದು ವಿಧಾನಪರಿಷತ್ತಿನಲ್ಲಿ ಮೈಸೂರು ವಿಭಾಗದ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಯಾಗಿ ವಿಧಾನಪರಿಷತ್ತಿನ ಅವಧಿಯಲ್ಲಿ ಅವರು ಶಾಸನ ಸಭೆಯನ್ನು ಕುರಿತು ನಡೆಸಿದ ಅಧ್ಯಯನ ಅದರ ಮುಂದಿನ ಕಾರ್ಯಗಳಲ್ಲಿ ತೀವ್ರ ಸಹಾಯಕಾರಿಯಾಗಿತ್ತು. 1967ರಲ್ಲಿ ವಿಧಾನಸಭೆಯನ್ನು ಪ್ರಥಮ ಬಾರಿಗೆ ಸಮಾಜವಾದಿ ಪಕ್ಷದಿಂದ ಸ್ಪರ್ಧಿಸಿ, ಚುನಾಯಿತರಾದಾಗ ಅವರ ಸ್ಥಾನ ಪ್ರತಿಪಕ್ಷಗಳ ಸಾಲಿನಲ್ಲಿ ಆ ಸಂದರ್ಭದಲ್ಲಿ ಇವರ ಜೊತೆಗಿದ್ದವರು. ಶಾಂತವೇರಿ ಗೋಪಾಲಗೌಡರಂಥ ಹಿರಿಯರ ಒಡನಾಟ ಅಜೀಜ್‌ಸೇಟ್‌ರಲ್ಲಿ ಸಾಮಾಜಿಕ ಹೊಸ ಅಧ್ಯಾಯವನ್ನೇ ತೆರೆಯಿತು.

## ವಿಧಾನ ಸಭೆಯಲ್ಲಿ ಮಾಡಿದ ಭಾಷಣಗಳು

### 1967-68 ಸಾಲಿನ ಬೇಡಿಕೆಗಳ ಮೇಲೆ ಚರ್ಚೆ

ಶ್ರೀ ಅಜೀಜ್ ಸೇಟ್ (ನರಸಿಂಹರಾಜ):- ಮಾನ್ಯ ಅಧ್ಯಕ್ಷರೇ, ನಾನು ಈ ದಿನ ಕನ್ನಡದಲ್ಲಿ ಮಾತನಾಡುತ್ತೇನೆ. ಅದರಲ್ಲಿ ಏನಾದರೂ ಸ್ವಲ್ಪ ತಪ್ಪು ಆದರೆ ಯಾರೂ ಮಧ್ಯೆ ದಯವಿಟ್ಟು ಅಡಚಣೆ ಮಾಡಬೇಡಿ. ಸ್ವಾಮಿ, ನನಗೆ ಈದಿನ ಬಹುಶಃ ಸ್ವಲ್ಪ ಕಾಲಾವಕಾಶ ಸಿಕ್ಕಿದೆಯೆಂದು ಕಾಣುತ್ತದೆ. ಈಗ ಅಡ್ಮಿನಿಸ್ಟ್ರೇಷನ್ ವಿಷಯದಲ್ಲಿ ನಾನು ಮೊದಲು ಮಾತನಾಡುತ್ತೇನೆ. ಅಡ್ಮಿನಿಸ್ಟ್ರೇಷನ್ ಈಗ ಯಾವ ಮಟ್ಟದಲ್ಲಿ ಬಂದಿದೆಯೆಂದು ಹೇಳಿದರೆ ಅದು ದೇವರೇ ಗತಿ; ಶ್ರೀ ನಾಗನಗೌಡರು ಮಾತನಾಡುತ್ತಾ ಲೆಜಿಸ್ಲೇಚರ್ಸ್ ಎಗ್ಜಿಕ್ಯುಟಿವ್‌ನಿಂದ ಬೇರೆ ಇರಬೇಕು, ಅವರು ಆಡಳಿತದ ಬಗ್ಗೆ ಮಧ್ಯೆ ಇಂಟರ್‌ಫಿಯರ್ ಮಾಡುವುದಕ್ಕೆ ಅವಕಾಶವಿಲ್ಲ ಎಂಬುದಾಗಿ ಹೇಳಿದರು. ಅಸೆಂಬ್ಲಿಯ ಸದಸ್ಯರುಗಳಿಗೆ ಆಫೀಸುಗಳಲ್ಲಿ ಮಾನ್ಯತೆ ಇಲ್ಲವೇಇಲ್ಲ. ಈ ವಿಚಾರವನ್ನು ನಾವು ಮೊದಲು ಮಂತ್ರಿಮಂಡಲದವರಿಗೆ ಹೇಳಬೇಕು. ಶ್ರೀಮಾನ್ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿ ರಾಮರಾಯರ ಮಂತ್ರಿ ಮಂಡಲವನ್ನು ಮಾಡಿದ್ದಾರೆ. ಈಗ ಉದಾಹರಣೆಗೆ ಹೇಳುವುದಾದರೆ ಈಗಿನ ಮಂತ್ರಿ ಮಂಡಲದವರು ಅಧಿಕಾರಕ್ಕೆ ಬಂದ ತಕ್ಷಣ ಯಾರಿಗೆ ಯಾರು ಯಾರು ಬೇಕೋ ಅವರನ್ನು ಅನೇಕ ಇಲಾಖೆಗಳಲ್ಲಿ ಎಲ್ಲೆಲ್ಲಿಂದ ಯಾರು ಯಾರನ್ನೋ ತೆಗೆದುಕೊಂಡು ಬಂದು ಹಾಕಿದ್ದಾರೆ. ಇದನ್ನು ಸ್ವಲ್ಪ ವಿಚಾರಮಾಡಿ ನೋಡಿದರೆ, ಶ್ರೀಮಾನ್ ರಾಚಯ್ಯನವರು ರೆವಿನ್ಯೂ ಇಲಾಖೆಯ ಮಂತ್ರಿಗಳಾಗಿ ಬಂದರು ಅವರ ಡಿಸ್ಟ್ರಿಕ್ಟಿನಲ್ಲಿ ಅವರಿಗೆ ಯಾರು ಯಾರು ಬೇಕೊ ಅವರನ್ನು ತೆಗೆದುಕೊಂಡು ಬಂದು ಹಾಕಿದ್ದಾರೆ. ಶ್ರೀಮಾನ್ ಪುಟ್ಟಸ್ವಾಮಿಯವರು ಮಂತ್ರಿಗಳಾಗಿ ಬಂದರು. ಅವರಿಗೆ ಯಾರು ಯಾರು ಬೇಕೊ ಅವರನ್ನು ತೆಗೆದುಕೊಂಡು ಬಂದು ಹಾಕಿದ್ದಾರೆ.

ಈ ರೀತಿ ಇವರು ಮಂತ್ರಿಗಳಾದ ತಕ್ಷಣ ಅನೇಕ ಟ್ರಾನ್ಸ್‌ಫರ್‌ಗಳನ್ನು ಮಾಡಿದ್ದಾರೆ. 3 ತಿಂಗಳು 6 ತಿಂಗಳು ಆಗಿದ್ದವರನ್ನೆಲ್ಲಾ ಟ್ರಾನ್ಸ್‌ಫರ್ ಮಾಡಿದ್ದಾರೆ. ಈ ಅನ್ಯಾಯ ಎಲ್ಲಿಯವರೆಗೆ ಆಗುತ್ತದೆ? ನಾವು ಪ್ರಜೆಗಳ ಪ್ರತಿನಿಧಿಗಳಾಗಿ ಈ ಸಭೆಗೆ ಬಂದಿರುವುದು ಏನೋ ಮಾತನಾಡಿ ಕೇವಲ 16 ರೂಪಾಯಿಗಳನ್ನು ತೆಗೆದುಕೊಂಡು ಹೋಗಲು ಬಂದಿಲ್ಲ. ನಡೆಯುವ ಅನ್ಯಾಯಗಳನ್ನು ಹೇಳಲೇಬೇಕು. ಮಾನ್ಯತೆ ಪಡೆಯುವುದರಲ್ಲಿ ದರ್ಜೆಯಲ್ಲಿ ನಾವೇನು ಮಂತ್ರಿಗಳಿಗಿಂತ ಕಡಿಮೆ ಇಲ್ಲ. ಮಂತ್ರಿಮಂಡಲದವರು ಸರ್ಕಾರವನ್ನು ನಡೆಸುತ್ತಿದ್ದಾರೆ. ನಾವು ಜನಗಳ ಪ್ರತಿನಿಧಿಗಳು, ಈ ಸರ್ಕಾರ ಜನಗಳ ಸರ್ಕಾರ. ಆದ್ದರಿಂದ ಮಂತ್ರಿಗಳಿಗೆ ಎಷ್ಟು ಮಾನ್ಯತೆ ಇದೆಯೋ ಅಷ್ಟೇ ಮಾನ್ಯತೆ ಸದಸ್ಯರಿಗೂ ಇದೆ. ಈ ಕಾಂಗ್ರೆಸ್ ಸರ್ಕಾರ ರಾಜ್ಯವನ್ನು ಯಾವ ಮಟ್ಟಕ್ಕೆ ತೆಗೆದುಕೊಂಡು ಬಂದಿದೆಯೆಂದರೆ, ಈ ರಾಜ್ಯವನ್ನು ಬಂಡವಾಳ ಷಾಹಿಗಳ ಅಪ್ಪನ ರಾಜ್ಯವನ್ನಾಗಿ ಮಾಡಿದ್ದಾರೆ. ಈಗ ಅಸೆಂಬ್ಲಿಯ ಸದಸ್ಯರುಗಳು ಕೆಲವು ಆಫೀಸುಗಳಿಗೆ ಹೋದರೆ ಅವರಿಗೆ ಸರಿಯಾದ ಗೌರವ ಸಿಕ್ಕುತ್ತಾ ಇಲ್ಲ. ಪ್ರಜಾಪ್ರಭುತ್ವ ಎಂದು ಹೇಳುವ ಮಾತೇ ಇಲ್ಲ. ಆಫೀಸುಗಳಲ್ಲಿ ಆಫೀಸರುಗಳು ಮನಸ್ಸಿಗೆ ಬಂದ ಹಾಗೆ ಮಾತನಾಡುತ್ತಾರೆ. ಈಗ ಅಡ್ಮಿನಿಸ್ಟ್ರೇಷನಿನಲ್ಲಿ ಉದಾಹರಣೆಗೆ ಹೇಳುವುದಾದರೆ, ಪ್ರಜಾಪ್ರಭುತ್ವ ಬಂದ ಮೇಲೆ ಡೈರೆಕ್ಟರ್, ಜಾಯಿಂಟ್ ಡೈರೆಕ್ಟರ್, ಅಡೀಷನಲ್ ಡೈರೆಕ್ಟರ್, ಡೆಪ್ಯುಟಿ ಡೈರೆಕ್ಟರ್, ಸೆಕ್ರಟರಿ, ಜಾಯಿಂಟ್ ಸೆಕ್ರೆಟರಿ ಅಡೀಷನಲ್ ಸೆಕ್ರೆಟರಿ, ಡೆಪುಟಿ ಸೆಕ್ರೆಟರಿ ಹೀಗೆ ಒಬ್ಬರಿಗೊಬ್ಬರಿಗೆ ಜಂಟಿಮಾಡಿ ಒಂದು ಇಂಜಿನ್ನಿಗೆ 20 ವ್ಯಾಗೆನ್‌ಗಳನ್ನು ಹಾಕಿ ಆ ಇಂಜಿನ್‌ಗಳನ್ನು ಸರಿಯಾಗಿ ನಡೆಯುವುದಿಲ್ಲ. ಆಫೀಸುಗಳಲ್ಲಿ ಒಂದು ಕಾಗದ ಮೂವ್ ಆಗಬೇಕಾದರೆ ಸೆಕ್ರೆಟರಿಯಿಂದ ತಹಶೀಲ್ದಾರರಿಗೆ ಬರಬೇಕಾದರೆ 365 ದಿನಗಳಾಗುತ್ತವೆ. ಪುನಃ ತಹಶೀಲ್ದಾರರಿಂದ ಸೆಕ್ರೆಟರಿಗೆ ಬರಬೇಕಾದರೆ 365 ದಿವಸ ಆಗುತ್ತದೆ. ಆ ಮೇಲೆ ಆ ಕಾಗದದ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾದರೆ ಎಷ್ಟೋ ದಿವಸ ಆಗುತ್ತದೆ ಎಂ.ಎಸ್.ಆರ್.ಟಿ.ಸಿ. ನಲ್ಲಿ ಒಬ್ಬ ನೌಕರನಿಗೆ ಪ್ರಮೋಷನ್ ಕೊಟ್ಟಿದ್ದ ವಿಚಾರ ಹೇಳುತ್ತೇನೆ. ಅವನಿಗೆ ಪ್ರಮೋಷನ್ ಆಗಿದೆ ಎನ್ನುವ ಕಾಗದ ಅವನು ಸ್ವರ್ಗಕ್ಕೆ ಹೋದಮೇಲೆ ಹೋಯಿತು. ಅಂದರೆ ಅವನು ಸತ್ತಮೇಲೆ ಅವನಿಗೆ ಪ್ರಮೋಷನ್ ಕೊಟ್ಟಿದ್ದಾರೆ. ಆಸ್ಪತ್ರೆಯಲ್ಲಿ ರೋಗಿಗೆ ಒಂದು ಬೆಡ್ ಅಲಾಟ್ ಮಾಡಬೇಕಾದರೆ ರೋಗಿ ಸತ್ತು ಸ್ವರ್ಗಕ್ಕೆ ಹೋದಮೇಲೆ, ನಿನಗೆ ಬೆಡ್ ಅಲಾಟ್ ಮಾಡಿದ್ದೇವೆ ಎಂದು ಪತ್ರ ಬರುತ್ತದೆ. ವಿದ್ಯಾಭ್ಯಾಸದ ಇಲಾಖೆಯ ವಿಷಯವನ್ನಂತೂ ಹೇಳಲೇಬೇಡಿ ಅಲ್ಲಿಗೆ ಕಾಗದವನ್ನು ಬರೆದರೆ ಉತ್ತರವೇ ಬರುವುದಿಲ್ಲ. ಇದಕ್ಕೆ ಪ್ರೂಫ್ ಏನೆಂದರೆ, ಶಾಸನಸಭಾ ಸದಸ್ಯರಿಗೆ ಪ್ರತ್ಯೇಕವಾದ ರಿಜಿಸ್ಟರ್ ಮೇಂಟೇನ್ ಮಾಡಿ ಅವರಿಗೆ ಸರಿಯಾದ ಉತ್ತರ ಕೊಡಬೇಕೆಂದು ಒಂದು ಸರ್ಕ್ಯುಲರನ್ನು ಸರ್ಕಾರದವರು ಹೊರಡಿಸಿದ್ದಾರೆ. ಅದಕ್ಕೆ ಇದೇ ಪ್ರೂಫ್. (ಮಾನ್ಯ ಸದಸ್ಯರು ಆ ಸರ್‌ಕ್ಯುಲರನ್ನು ಸಭೆಯಲ್ಲಿ ಎತ್ತಿ ತೋರಿಸಿದರು) ಇನ್ನೊಂದು ಸರ್‌ಕ್ಯುಲರ್ ಇಂಡಿಯಾ ಸರ್ಕಾರದಿಂದ ಬಂದಿದೆ. ಅದೇನೆಂದರೆ, ಆಫೀಸುಗಳಿಗೆ ಶಾಸನಸಭಾ ಸದಸ್ಯರು ಹೋದಾಗ ಅಧಿಕಾರಿಗಳು ಎದ್ದುನಿಂತು

ಅವರಿಗೆ ಮರ್ಯಾದೆ ಗೌರವ ಕೊಡಬೇಕೆಂದಿದೆ. ಈ ಮರ್ಯಾದೆಯನ್ನು ಕೊಡುವುದರಲ್ಲಿಯೂ ಎ.ಬಿ.ಸಿ.ಡಿ. ಎಂದು ದರ್ಜೆ ಇದೆ. ರಾಜಕೀಯದಲ್ಲಿ ಕಾನ್‌ಸ್ಟಿಟ್ಯೂಷನ್ ರೈಟ್ಸ್ ಇಟ್ಟುಕೊಂಡು ಕೆಲಸ ಮಾಡುತ್ತಾ ಕಾನ್‌ಸ್ಟಿಟ್ಯೂಷನ್ ಅನ್ನು ಒಪ್ಪಿಕೊಂಡಿದ್ದರೂ ಕೂಡ ಜಾತಿ, ಮತ, ಬೇಧಭಾವನೆಯನ್ನು ಇಟ್ಟುಕೊಂಡಿದ್ದಾರೆ. ಈಗ ಯಾರಾದರೂ ಒಂದು ಜಾತಿಯ ಒಬ್ಬ ಅಧಿಕಾರಿ ಇದ್ದರೆ ಅಲ್ಲಿಗೆ ಬೇರೆ ಯಾರಾದರೂ ನೌಕರರು ಬರಬೇಕಾದರೆ ಅವನ ಜಾತಿಯವನೇ ಅಲ್ಲಿಗೆ ಬರಬೇಕು. ಈ ರೀತಿ ಆಗಿದೆ. ಈಗ ಮೆಡಿಕಲ್ ಇಲಾಖೆಯ ವಿಷಯವನ್ನು ಹೇಳಬೇಕಾದರೆ ಅದು ಎಲ್ಲರಿಗೂ ಬೇಕು. ರೋಗಗಳನ್ನು ವಾಸಿಮಾಡುವುದಕ್ಕೆ ಆ ಇಲಾಖೆ ಎಲ್ಲರಿಗೂ ಬೇಕು. 4-5 ಜನ ಜಾಯಿಂಟ್ ಡೈರೆಕ್ಟರಿದ್ದಾರೆ. ಡೀಸೆಂಟ್ರಲೈಜೇಷನ್ ಆಫ್ ಪವರ್ಸ್, ಅಧಿಕಾರ ವಿಕೇಂದ್ರೀಕರಣ ಆಗಿಲ್ಲ. ಬ್ರಿಟಿಷ್‌ನವರ ಕಾಲದಲ್ಲಿ ರಾಜ ಮಹಾರಾಜರ ಕಾಲದಲ್ಲಿ ಯಾರು ಯಾರಿಗೆ ಏನೇನು ಅಧಿಕಾರ ಇತ್ತೋ ಅದೇ ಅಧಿಕಾರ ಈಗಲೂ ಇದೆ. ನಮಗೆ ಸ್ವಾತಂತ್ರ್ಯ ಬಂದ ಮೇಲೆ ಇನ್ನೂ ಸರಿಯಾಗಿ ಅಧಿಕಾರ ವಿಕೇಂದ್ರೀಕರಣವಾಗಿಲ್ಲ. ನಾವೇನೋ ನಮಗೆ ಸ್ವಾತಂತ್ರ್ಯ ಬಂದ ಮೇಲೆ ಸುಲಭವಾಗಿ ಕೆಲಸಕಾರ್ಯಗಳು ಚೆನ್ನಾಗಿ ನಡೆಯುತ್ತವೆ, ಜನಗಳಿಗೆ ಉಪಕಾರವಾಗುತ್ತದೆ ಎಂದರೆ ಅದೇನೂ ಆಗಲಿಲ್ಲ. ಯಾವುದಾದರೂ ಒಂದು ಕೆಲಸ ಆಗಬೇಕಾದರೆ ಡೆಪ್ಯುಟಿ ಕಮೀಷನರಿಂದ ಡಿವಿಜನಲ್ ಕಮೀಷನರಿಗೆ ಬರಬೇಕು, ಡಿವಿಜನಲ್ ಕಮೀಷನರಿಂದ ಸೆಕ್ರೆಟರಿಗೆ ಬರಬೇಕು. ಸೆಕ್ರೆಟರಿಯು ಸಂಬಂಧಪಟ್ಟ ಮಂತ್ರಿಗಳನ್ನು ಕೇಳದೆ ಏನೂ ಮಾಡುವುದಕ್ಕಾಗುವುದಿಲ್ಲ. ಈ ದೇಶದಲ್ಲಿ ಏನಾದರೂ ಕ್ರಾಂತಿ ಆದರೆ ಅದಕ್ಕೆ ಅಧಿಕಾರಿಗಳೇ ಜವಾಬ್ದಾರಿ. ದೇಶದಲ್ಲಿ ಕೆಲಸಕಾರ್ಯಗಳು ನಡೆಯುವುದಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಬಡ್ಜೆಟ್ಟಿನಲ್ಲಿ ಮಂಜೂರು ಮಾಡಿದ್ದಾರೆ. ಇವರು ಅಧಿಕಾರಕ್ಕೆ ಬಂದ ಮೇಲೆ ಯಾವುಯಾವುದಕ್ಕೋ ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ. ಕೆಲಸಗಳನ್ನು ಮಾಡುವುದು ಬೇಡಿ ಎಂದು ನಾನು ಹೇಳುತ್ತಿಲ್ಲ. ಕೆಲಸವನ್ನು ಮಾಡುವಾಗ ಸ್ವಲ್ಪ ತಿಳಿದುಕೊಂಡು ಮಾಡಿ, ಈಗ ಈ ಸರ್ಕಾರದ ಆಡಳಿತದಲ್ಲಿ ಇವರು ವಿರೋಧ ಪಕ್ಷದವರು, ಇವರು ಕಾಂಗ್ರೆಸ್ ಪಕ್ಷದವರು ಎನ್ನುವ ಬೇಧಭಾವವನ್ನಿಟ್ಟುಕೊಂಡು ಕೆಲಸಕಾರ್ಯಗಳನ್ನು ಮಾಡುತ್ತಿದ್ದಾರೆಯೇ ಹೊರತು ಆಯಾ ಕೆಲಸದ ದರ್ಜೆ, ಮೆರಿಟ್ ಮೇಲೆ ಈ ಸರ್ಕಾರದಲ್ಲಿ ಕೆಲಸ ಕಾರ್ಯಗಳು ನಡೆಯುತ್ತಿಲ್ಲ. ಮುಖ್ಯಮಂತ್ರಿಗಳು ಕೈಗಾರಿಕೆ, ವ್ಯವಸಾಯ ಮತ್ತು ಜನರಲ್ ಅಡ್ಮಿನಿಸ್ಟ್ರೇಷನ್ ಈ ಮೂರು ಪೋರ್ಟ್‌ಫೋಲಿಯೋಗಳನ್ನು ಇಟ್ಟುಕೊಂಡಿದ್ದಾರೆ. ಇದರ ಜೊತೆಗೆ ಅವರು ರಾಜಕೀಯದಲ್ಲಿ ದುಡಿಯಬೇಕು. ಒಂದು ಪಕ್ಷ ಪಾರ್ಟಿಯಲ್ಲಿಯೂ ಕೆಲಸ ಮಾಡಬೇಕಾಗುತ್ತದೆ. ಈ ರೀತಿ ಅವರು 24 ಘಂಟೆಯ ಕಾಲವೂ ಶ್ರಮಪಟ್ಟು ದುಡಿಯಬೇಕಾಗುತ್ತದೆ. ಅವರಿಗೆ ಇವುಗಳನ್ನೆಲ್ಲಾ ನಿರ್ವಹಣೆ ಮಾಡುವ ಕಾಲದಲ್ಲಿ ಕಾಲಾವಕಾಶವೇ ಇರುವುದಿಲ್ಲ. ಕೈಗಾರಿಕೆ ಇಲಾಖೆಯಲ್ಲಿ ರೆಮ್ಕೋ ಫ್ಯಾಕ್ಟರಿಯು ಮುಚ್ಚುವ ಪರಿಸ್ಥಿತಿಯಲ್ಲಿದೆ ಬೆಳಗೊಳದಲ್ಲಿರುವ ಎಂ.ಸಿ.ಎಫ್. ಫ್ಯಾಕ್ಟರಿಯು ಅರ್ಧ ಜೀವ ಬಿಟ್ಟಿದೆ.

ಅದೂ ಹೋಗುತ್ತದೆ ಗುಲ್ಬರ್ಗಾದಲ್ಲಿ ಒಂದು ಮಿಲ್ಲು, ಕ್ಲೋಜ್ ಆಯಿತು. ಮಂಡ್ಯಾ ನ್ಯಾಷನಲ್ ಪೇಪರ್ ಮಿಲ್ ಕ್ಲೋಜ್ ಆಯಿತಾ ಈ ಕೈಗಾರಿಕೆಯ ಇಲಾಖೆಯ ವಿಷಯವನ್ನು ಸತ್ಯವಾಗಿ ಹೇಳಬೇಕಾದರೆ ಇದು ಒಂದು ದೊಡ್ಡ ರ್ಯಾಕೆಟ್ ಆಗಿದೆ. ಆಮೇಲೆ ಶ್ರೀಮಾನ್ ರಾಮರಾಯರ ಕೈಯಲ್ಲಿ ಪೋಲೀಸ್ ಇಲಾಖೆಯನ್ನು ಕೊಟ್ಟಿದ್ದಾರೆ. ಪೊಲೀಸಿನವರ ಹಾವಳಿಯಲ್ಲಿ ಯಾರು ಏನೂ ಮುಂದೆ ಬಂದು ಕೆಲಸ ಮಾಡುವುದಕ್ಕಾಗುವುದಿಲ್ಲ. ಇದೂ ಒಂದು ದೊಡ್ಡ ರ್ಯಾಕೆಟ್ ಇದೆ. ಡೈರೆಕ್ಟರ್ ಆಫ್ ಇಂಡಸ್ಟ್ರಿಸ್ ಅವರು ಶ್ರೀಮಾನ್ ಶಾಮಣ್ಣನವರು ಬಹಳ ಹಳೆಯಕಾಲದವರು, ಅವರು ಎಷ್ಟು ಕೈಗಾರಿಕೆಗಳಿಗೆ ಚೇರ್ಮನರಾಗಿದ್ದಾರೆ. ಎಂಬುದಕ್ಕೆ ಲೆಕ್ಕವೇ ಇಲ್ಲ. ಡೆವಲಪ್‌ಮೆಂಟ್ ಆಫ್ ಇಂಡಸ್ಟ್ರೀಸ್ ಕಮಿಟಿಯಲ್ಲಿ ಕೆಲವು ಜನ ಸದಸ್ಯರಿದ್ದಾರೆ. ಎಲ್ಲಿಗೆ ಹೋದರೂ ಕೂಡ ಆ 3-4 ಜನಗಳೇ ಇದ್ದಾರೆ. ಇದು ಏನಾಗಿದೆ ಎಂದರೆ, ಪೇಟೆಂಟ್ ರಿಜಿಸ್ಟರ್ಡ್ ಟ್ರೇಡ್ ಮಾರ್ಕ್ ಇದ್ದ ಹಾಗೆ ಆಗಿದೆ. ಟಿ.ಎ., ಡಿ.ಎ. ಸೌಕರ್ಯವನ್ನು ಪಡೆಯುವುದಕ್ಕೆ ಈ ರೀತಿ ಮಾಡುತ್ತಿದ್ದಾರೆ. ಕೈಗಾರಿಕೆಗಳ ಅಭಿವೃದ್ಧಿ ಸರಿಯಾಗಿ ನಡೆಯುತ್ತಿಲ್ಲ. ದೇಶದಲ್ಲಿ ನಿರುದ್ಯೋಗ ಜಾಸ್ತಿಯಾಗುತ್ತಿದೆ. ಸರ್ಕಾರದವರು ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಆಫೀಸನ್ನು ಇಟ್ಟಿದ್ದಾರೆ. ಈ ಕೈಗಾರಿಕೆಯ ಇಲಾಖೆಯಲ್ಲಿ ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಆಫೀಸಿನ ಮೂಲಕ ಯಾರನ್ನಾದರೂ ಕೆಲಸಕ್ಕೆ ತೆಗೆದುಕೊಂಡಿದ್ದಾರೆಯೇ ಎಂದರೆ ಯಾರನ್ನೂ ತೆಗೆದುಕೊಂಡ ಹಾಗೆ ನಮಗೆ ಕಾಣುವುದಿಲ್ಲ. ಇವೊತ್ತು ನಾವು ನಮ್ಮ ದೇಶದಲ್ಲಿ ನೋಡುತ್ತಿದ್ದೇವೆ ಮದ್ರಾಸ್ ಮತ್ತು ಕೇರಳದಿಂದ ಅನೇಕ ಜನರು ನಮ್ಮ ದೇಶಕ್ಕೆ ಬಂದು ಕೆಲಸ ಮಾಡುತ್ತಿದ್ದಾರೆ. ನಮ್ಮ ಮೈಸೂರಿನ ಜನ, ಕರ್ನಾಟಕದಲ್ಲಿರುವ ಜನ ಕೆಲಸ ಇಲ್ಲದೆ ಸಾಯುತ್ತಿದ್ದಾರೆ. ಏತಕ್ಕೋಸ್ಕರ ಈ ರೀತಿ ಆಗುತ್ತಿದೆ? ಇದಕ್ಕೆ ಮೂಲಭೂತವಾದ ಕಾರಣವೇನೆಂದರೆ ಅಧಿಕಾರ ಕೇಂದ್ರೀಕರಣವೆಂಬ ವಿಷ ಇದೆ. ಅದು ಇಡೀ ದೇಶವನ್ನೇ ಸಾಯುವ ಪರಿಸ್ಥಿತಿಗೆ ತರುತ್ತಿದೆ. ನಾನು ಎಚ್ಚರಿಕೆಯಿಂದ ಹೇಳುತ್ತೇನೆ. ಡೀಸೆಂಟ್ರಲೈಜೇಷನ್ ಮಾಡಬೇಕು. ಬ್ರಿಟಿಷರ ಕಾಲದಲ್ಲಿ ಹಾಕಿದಂತಹ ಬೇಸ್‌ಮೆಂಟನ್ನು ಬದಲಾಯಿಸಬೇಕು. ಈ ಆಡಳಿತ ಕಟ್ಟಡ ಬೀಳುವ ಸ್ಥಿತಿಗೆ ಬರುತ್ತದೆ. ನಮ್ಮವರು ಬಹಳ ಒಳ್ಳೆಯ ಜನ. ಆದರೂ ಕೂಡ ಇನ್ನೂ ಇದನ್ನು ತಡೆಯುವುದಕ್ಕೆ ಆಗುವುದಿಲ್ಲ. ಸ್ವಲ್ಪ ಕಾಲದಲ್ಲಿ ನಮ್ಮ ದೇಶದಲ್ಲಿ ರೆವಲ್ಯೂಷನ್ ಬರುತ್ತದೆ ಎಂದು ಹೇಳುತ್ತೇನೆ. ಇದಕ್ಕೆಲ್ಲಾ ಐ.ಎ.ಎಸ್. ಮತ್ತು ಐ.ಪಿ.ಎಸ್. ಆಫೀಸರ್‌ಗಳು ಮೂಲ ಕಾರಣವಾಗಿದ್ದಾರೆ. ಇವತ್ತಿನ ದಿವಸ ಸರಕಾರಿ ಅಧಿಕಾರಿಗಳಿಗೆ ನಾವು ಲೆಜಿಸ್ಲೇಟರ್ಸ್ ಎಂದು ಹೇಳಿದರೆ ಅದಕ್ಕೆ ಅವರ ಗಮನವಿಲ್ಲ. ಅಧಿಕಾರಿಗಳು ನನಗೆ ಏನಾದರೂ ಅಂಥ ಉತ್ತರ ಕೊಟ್ಟರೆ ನನಗೆ ವಿಪರೀತ ಕೋಪ ಬಂದು ನಾನು ಅವರ ಮುಖಕ್ಕೆ ಹೊಡೆದುಬಿಡುತ್ತಿದ್ದೆನು. ಒಟ್ಟಿನಲ್ಲಿ ಹೇಳುವುದು ಏನೆಂದರೆ, ಈ ಅಧಿಕಾರಿಗಳಿಗೆ ಯಾರ ಭೀತಿಯೂ ಇಲ್ಲ. ನಾವು ಸೆಕ್ರೆಟರಿಯೆಟ್ಟಿಗೆ ಏನಾದರೂ ಕಾಗದ ಬರೆದರೆ ಅದಕ್ಕೆ ಉತ್ತರವೇ ಬರುವುದಿಲ್ಲ. ನಾನ್ ಗೆಜೆಟೆಡ್ ಆಫೀಸರ್ಸ್ ಬಗ್ಗೆ ಮುಖ್ಯಮಂತ್ರಿಗಳು ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಒಂದು ಮಾತು ಹೇಳಿದರು. ಅವರ

ಕಷ್ಟ ಸುಖದ ಬಗ್ಗೆ ಸಕಾಲದಲ್ಲಿ ಯೋಚನೆ ಮಾಡಿ ಪರಿಹಾರ ಮಾಡುತ್ತಿಲ್ಲ. ಇದರಿಂದ ಏನಾಗಿದೆ ಎಂದರೆ, ಅವರಲ್ಲಿ ಡಿಸ್‌ಕಂಟೆಂಟ್‌ಮೆಂಟ್, ಡಿಸ್ ಸ್ಯಾಟಿಸ್‌ಫ್ಯಾಕ್ಷನ್ ಬೆಳೆದಿದೆ. ನಾನ್ ಗೆಜೆಟೆಡ್ ಆಫೀಸರುಗಳು ಅಸಮಾಧಾನವಾಗಿದ್ದಾರೆ, ಅತೃಪ್ತರಾಗಿದ್ದಾರೆ. ಇದನ್ನು ಯಾರು ನೋಡಬೇಕು? ಆಯಾಯ ಇಲಾಖೆಯ ಸೆಕ್ರೆಟರಿ ಮತ್ತು ಇಲಾಖಾ ಮುಖ್ಯಾಧಿಕಾರಿ ಅವರು ನೋಡಬೇಕು. ಪ್ರಜಾಪ್ರಭುತ್ವದಲ್ಲಿ ಮುಖ್ಯಮಂತ್ರಿಗಳು ಆಗಿರುವವರು ಇದನ್ನು ನೋಡಬೇಕು. ಬ್ರಿಟಿಷರ ಕಾಲದಲ್ಲಿರುವ ಹಾಗೆ ಒಂದು ಅರ್ಜಿ ತಂದರೆ ಅದರ ಮೇಲೆ 'ಅಂಡರ್ ಕನ್ಸಿಡರೇಷನ್' ಎಂದು ಬರೆಯುತ್ತಾರೆ. "Under consideration file may be put up" "ಯೋಚನೆ ಮಾಡೋಣ, ನೋಡೋಣ" ಎಂದು ಹೇಳುತ್ತಾರೆ. ಈ ಪದಗಳನ್ನು ಬಿಟ್ಟು ಬೇರೆ ಪದ ಉಪಯೋಗಿಸುವುದಿಲ್ಲ. ಆದುದರಿಂದ ಕೆಲಸ ಮಾಡಿಕೊಡುವುದಕ್ಕೆ ಅವಕಾಶ ಮಾಡಿಕೊಡಬೇಕು ಎಂದು ಹೇಳುತ್ತೇನೆ. ಇಲ್ಲದಿದ್ದರೆ ಜನರಿಗೆ ಬಹಳ ಅನಾನುಕೂಲವಾಗುತ್ತದೆ. ಇಂಥ ನಿಜಾಂಶಸಂಗತಿ ಹೇಳಿದರೆ ಏನಾದರೂ ಪ್ರಯೋಜನವಾಗುತ್ತದೇನು? ನಿಜ ಹೇಳಿದರೆ ಅಪಚಾರವಾಗುತ್ತದೆ. ಸರಕಾರ ಅಂದರೆ ಒಂದು ಎಮ್ಮೆ ಇರುವ ರೀತಿಯಲ್ಲಿ ಇದೆ. ಮೊದಲನೇ ಏಟಿಗೆ ಎಲ್ಲಿಯೋ ಶಬ್ದವಾಯಿತು. ಅನ್ನುತ್ತದೆ. ಎರಡನೆ ಏಟಿಗೆ ಶಬ್ದ ಹತ್ತಿರ ಕೇಳಿಸುತ್ತದೆ ಅನ್ನುತ್ತದೆ. ಮೂರನೇ ಏಟಿಗೆ ಕಿವಿಯ ಹತ್ತಿರ ಬಂತು ಅನ್ನುತ್ತದೆ. ನಾಲ್ಕನೇ ಏಟು ಬಿತ್ತು ಅಂದರೆ ಅದಕ್ಕೆ ಗೊತ್ತಾಗುತ್ತದೆ. ಮೊದಲನೇ ಏಟು ಅಂದರೆ, ಮೊದಲನೇ ಮಹಾ ಚುನಾವಣೆ. ಈ ರೀತಿ ನಾಲ್ಕು ಏಟುಗಳು ಈಗಾಗಲೇ ಬಿದ್ದಿವೆ. ಇನ್ನು ಐದನೇ ಏಟು ಬೀಳತಕ್ಕದ್ದು ಇದೆ. ಐದನೇ ಏಟು ಬಿತ್ತು ಅಂದರೆ ಇದಕ್ಕೆ ಬುದ್ಧಿ ಬರುತ್ತದೆ. ನಿಜವಾಗಿಯೂ ಚೀಫ್ ಮಿನಿಸ್ಟರ್ ಅವರು ಆರ್ಮಿ ಆಫ್ ಮಿನಿಸ್ಟರ್ಸ್ ಇಟ್ಟುಕೊಂಡಿದ್ದಾರೆ. ಇದು ರೆಪ್ರೆಜೆಂಟೇಟಿವ್ ಕ್ಯಾರೆಕ್ಟರ್ ಆಗಿದೆಯೇ? ನಮ್ಮವರು ಒಬ್ಬ ಡೆಪ್ಯೂಟಿ ಮಿನಿಸ್ಟರ್ ಮಾತ್ರ ಇದ್ದಾರೆ. ಈ ಸಭೆಯಲ್ಲಿ ಇರುವ 25 ಜನ ಮುಸ್ಲಿಂ ಸದಸ್ಯರಿಗೆ ಒಬ್ಬ ಡೆಪ್ಯೂಟಿ ಮಿನಿಸ್ಟರ್ ಅಬ್ದುಲ್ ಗಫಾರ್ ಅವರು ಇದ್ದರೆ ಸರಿಯಾದ ರೆಪ್ರೆಜೆಂಟೇಷನ್ ಆಯಿತೇ? ರೆಪ್ರೆಜೆಂಟೇಟಿವ್ ಕ್ಯಾರೆಕ್ಟರ್ ಬರೀ ಕಾಗದದ ಮೇಲೆ ಉಳಿದಿದೆ. ಎಲ್ಲರಿಗೂ ನ್ಯಾಯ ದೊರಕಿಸಿ ಕೊಡುತ್ತೇವೆ ಎಂದು ಈ ಸಭೆಯಲ್ಲಿ ಮೇಲೆ ತಕ್ಕಡಿ ಚಿಹ್ನೆ ಇಟ್ಟುಕೊಂಡಿದ್ದೀರಿ. ಇದು ನ್ಯಾಯವೇ, ಇದು ಧರ್ಮವೇ? ಒಂದೊಂದು ಪರಡಿಯಲ್ಲಿ ನನ್ನನ್ನು ಮತ್ತು ಅಬ್ದುಲ್ ಗಫಾರ್ ಅವರನ್ನು ಇಟ್ಟು ತೂಕ ಮಾಡಿದರೆ ನನ್ನ ತೂಕ ಜಾಸ್ತಿಯಾಗುತ್ತದೆ. ಸ್ಟೇಟ್ ಕಮಿಟಿಗಳಲ್ಲಿ ಒಬ್ಬ ಲೆಜಿಸ್ಲೇಟರ್ ಇಲ್ಲದೆ ಕಮಿಟಿ ಆಯಿತೆ? ಹಜ್ ಕಮಿಟಿ ಮತ್ತು ಸ್ಟೇಟ್ ವಕ್ಫ್ ಬೋರ್ಡಿನಲ್ಲಿ ಒಬ್ಬ ಲೆಜಿಸ್ಲೇಟರ್ ಇಲ್ಲದೆ ಅದು ಕಮಿಟಿ ಹೇಗೆ ಆಗುತ್ತದೆ.

ಇನ್ನು ಮುಜರಾಯಿ ಇಲಾಖೆ ಬಗ್ಗೆ ಹೇಳುವುದಾದರೆ, ಬೆಂಗಳೂರು ಸಿಟಿಯಲ್ಲಿ ಮುಸ್ಲಿಮರ ಹತ್ತಿಪ್ಪತ್ತು ಕೋಟಿ ರೂಪಾಯಿಗಳ ಆಸ್ತಿ ಇದೆ. ತಿಂಗಳಿಗೆ ಎರಡು ಸಾವಿರ ರೂಪಾಯಿ ಬಾಡಿಗೆ ಬರುವ ಆಸ್ತಿ ಇರತಕ್ಕ ಒಂದು ದರ್ಗಾ ಇದೆ. ಇದನ್ನು ಎರಡು ನೂರು

ರೂಪಾಯಿಗಳಿಗೆ ಮುಜರಾಯಿ ಇಲಾಖೆಯವರು ಕೊಟ್ಟು ಬಿಟ್ಟಿದ್ದಾರೆ. ಈ ದುಡ್ಡು ಬೇರೆಯವರ ಜೇಬಿಗೆ ಹೋಗುತ್ತಿದೆ. ಈ ರೀತಿ ಅನ್ಯಾಯ ಮಾಡಿದರೆ ಹೇಗೆ? ಇದು ಬಹಳ ವಿಷಾದಕರ ವಿಷಯ.

ಚೀಫ್ ಮಿನಿಸ್ಟರ್ ಸಾಹೇಬರು ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟ್, ಅಗ್ರಿಕಲ್ಚರಲ್ ಡಿಪಾರ್ಟ್‌ಮೆಂಟ್, ಜನರಲ್ ಅಡ್ಮಿನಿಸ್ಟ್ರೇಷನ್ ಇಲಾಖೆಗಳನ್ನು ಇಟ್ಟುಕೊಂಡಿದ್ದಾರೆ. ಈ ಮೂರರಲ್ಲಿ ಒಂದನ್ನು ಇಟ್ಟುಕೊಳ್ಳಲಿ. ಎಲ್ಲವನ್ನೂ ಇಟ್ಟುಕೊಂಡರೆ ಅವರಿಗೆ ಭಾರವಾಗುತ್ತದೆ. ಆದುದರಿಂದ ಪೋರ್ಟ್ ಫೋಲಿಯೋ ಬದಲಾವಣೆ ಮಾಡಿಕೊಳ್ಳಿ ಎಂದು ಹೇಳುತ್ತೇನೆ.

ಇನ್ನು ಹೋಂ ಮತ್ತು ಲೇಬರ್ ಎರಡೂ ಇಲಾಖೆಗಳನ್ನು ಶ್ರೀ ಎಂ.ವಿ. ರಾಮರಾವ್ ಅವರು ಇಟ್ಟುಕೊಂಡಿದ್ದಾರೆ. ಒಬ್ಬರ ಅಧಿಕಾರಕ್ಕೆ ಈ ಎರಡು ಇಲಾಖೆಗಳು ಒಳಪಟ್ಟಿವೆ. ಇದರಿಂದ ತೊಂದರೆಯಾಗಿದೆ. ನನ್ನ ಮೇಲೆ ಕೂಡ ಎಂಟು ಒಂಭತ್ತು ಕೇಸುಗಳಿವೆ. ಕೇಸು ಹಾಕುವುದರಲ್ಲಿ ಕೈವಾಡ ನಡೆಯುತ್ತಿದೆ. ಮಹಾ ಮಂತ್ರಿಗಳಾದ ಶ್ರೀ ಕೆ. ಪುಟ್ಟಸ್ವಾಮಿಯವರೇ ಕಾರಣರು ಎಂದು ಹೇಳುತ್ತೇನೆ. ಡೆಪ್ಯೂಟಿ ಸೂಪರಿಂಟೆಂಡ್ ಆಫ್ ಪೊಲೀಸ್ ಅವರಿಗೆ ಮತ್ತು ಇನ್‌ಸ್ಪೆಕ್ಟರ್ ಅವರಿಗೆ ಅಜೀಜ್ ಸೇಟ್ ಬಗ್ಗೆ ಹೀಗೆ ಮಾಡಿ ಹಾಗೆ ಮಾಡಿ ಕೇಸು ಹಾಕಿ ಎಂದು ಹೇಳುತ್ತಾರೆ. ಇಂಥ ಮಂತ್ರಿ ಇದ್ದರೆ ಹೇಗೆ? ಇದು ಹೇಗೆ ನ್ಯಾಯವಾಗುತ್ತದೆ? ಇದರಲ್ಲಿ ಸತ್ಯತಪ ಹಿಡಿಯಬಹುದೇ ಸ್ವಾಮಿ? ಇದು ಪ್ರಜಾಪ್ರಭುತ್ವದಕಾಲ. ಪ್ರಜಾಪ್ರಭುತ್ವದಲ್ಲಿ ಮೈಸೂರು ಮುನಿಸಿಪಲ್ ಕೌನ್ಸಿಲ್ಲಿನ ಸದಸ್ಯರಾದ ಖಲೀಲ್ ಅವರಿಗೆ ಹೇಗೆ ತೊಂದರೆ ಕೊಟ್ಟಿದ್ದಾರೆ ಗೊತ್ತಿದೆಯೇ? ಇವರಿಗೆ ಕಾನೂನು ಇಲ್ಲವೆ? ಅವರು ಮೊದಲು ಕಾಂಗ್ರೆಸ್ಸಿನಲ್ಲಿದ್ದವರು. ಈಗ ಮೈಸೂರು ಮುನಿಸಿಪಲ್ ಕೌನ್ಸಿಲರ್ ಆಗಿದ್ದಾರೆ. ಅವರು ಮದ್ದೂರಿನ ಒಂದು ಅಸೋಸಿಯೇಷನ್ನಿನ ಸೆಕ್ರೆಟರಿಯಾಗಿ ಕೆಲಸ ಮಾಡಿದ್ದಾರೆ. ಅವರ ಮೇಲೆ ಆರು ಕೇಸುಗಳಿವೆ. ಇದಕ್ಕೆ ಕಾರಣ ಏನು? ಒಂದು ಕೇಸಿನಲ್ಲಿ ಇವರು ಪರಾರಿ ಆಗಿದ್ದಾರೆಂದು ಮ್ಯಾಜಿಸ್ಟ್ರೇಟ್ ಅವರಿಗೆ ಹೇಳಿ ಕೋರ್ಟಿನಿಂದ ವಾರೆಂಟ್ ತಂದು ಮುನಿಸಿಪಲ್ ಕೌನ್ಸಿಲರ್ ಆಗಿರುವವರನ್ನು ಅರೆಸ್ಟ್ ಮಾಡಿ ಮೈಸೂರು ಬೀಡಿ ಮಜ್‌ದೂರು ಸಂಘದ ಅಧ್ಯಕ್ಷರನ್ನು ಲಾಕಪ್ಪಿನಲ್ಲಿಟ್ಟು ಮತ್ತೊಬ್ಬ ಖೈದಿಯೊಡನೆ ಹ್ಯಾಂಡ್ ಕಫ್ ಹಾಕಿ ಪೆರೇಡ್ ಮಾಡಲಾಯಿತು? ಇದು ಪ್ರಜಾಪ್ರಭುತ್ವವೇ? ಇದೆಂಥ ಡೆಮೊಕ್ರಸಿ? ಗಾಂಧಿ ಮತ್ತು ನೆಹರು ಹೆಸರಿನಲ್ಲಿ ನೀವು ಜೀವನ ಮಾಡುತ್ತೀರಿ ಬ್ರಿಟಿಷ್ ಸರಕಾರದಲ್ಲಿ ಕೂಡ ಇಷ್ಟು ಅವಮರ್ಯಾದೆಯಾಗಿಲ್ಲ. ಇಂದು ನಮ್ಮ ಜನರಿಂದ ನಮ್ಮ ದೇಶದಲ್ಲಿ ನಮಗೆ ಅವಮರ್ಯಾದೆ ಮಾಡಲಾಗುತ್ತಿದೆ. ಒಬ್ಬ ಕೇಡಿ ಜೊತೆಗೆ ಹ್ಯಾಂಡ್ ಕಫ್ ಹಾಕಿ ಅವಮರ್ಯಾದೆ ಮಾಡುವುದೇ? ಪುನಃ ಕೋರ್ಟಿಗೆ ಕಳಿಸುವುದೇ? ಇದು ಕಾಂಗ್ರೆಸ್ಸಿನವರಿಗೆ ಬೇಕು ಎಂದು ಅಭಿಪ್ರಾಯವೆ? ಸರಕಾರ ನಡೆಸಬೇಕು ಅಂದರೆ ಜನರಿಗೆ ಆಗುವ ಅನ್ಯಾಯ ನಿಲ್ಲಿಸಬೇಕು, ನ್ಯಾಯ ದೊರಕಿಸಿಕೊಡಬೇಕು. ಇದು ಒಂದು ಪಕ್ಷಕ್ಕೆ ಸೇರಿದ ವಿಷಯವಲ್ಲ. ಈ ರೀತಿ ನೀವು ಮಾಡುವುದರಿಂದ ಏನು ಆಗಲಿಕ್ಕಿಲ್ಲ ಎಂಬುದನ್ನು ಯೋಚನೆ ಮಾಡಿ

ಅಧಿಕಾರಿಗಳು ಡಿಸ್‌ಕಂಟೆಂಟ್ ಆಗಿದ್ದಾರೆ. ಇದು ಹೇಗೆ? ನನಗೆ ಅನಿಸುತ್ತದೆ, ಇದು ಐ.ಎ.ಎಸ್. ಮತ್ತು ಐ.ಪಿ.ಎಸ್. ಅಧಿಕಾರಿಗಳ ರಾಜಕೀಯವಾಗುತ್ತದೆ. ಒಂದು ದಿವಸ ರಾಜ್ಯಕ್ರಾಂತಿಯಾಗಿ ಐ.ಪಿ.ಎಸ್. ಮತ್ತು ಐ.ಎ.ಎಸ್. ಅಧಿಕಾರಿಗಳು ಲೆಜಿಸ್ಲೇಚರ್ಸ್, ಮಿನಿಸ್ಟರ್ಸ್ ಎಲ್ಲರನ್ನೂ ಅರೆಸ್ಟ್ ಮಾಡಿ ಇವರು ರಾಜ್ಯಾಡಾಡಳಿತ ನಡೆಸುತ್ತಾರೆ ಎಂದು ನನಗೆ ತೋರುತ್ತದೆ. ಇದು ಬಹಳ ಅಪಾಯ. ಏನು ಮಾತನಾಡುವುದಕ್ಕೂ ಇಂದು ಕಷ್ಟ ಇದೆ. ಅವರಿಗೆ do not interfere ಎಂದು ಹೇಳುತ್ತೀರಾ? ಇಂಟರ್‌ಫಿಯರ್ ಮಾಡುವುದಿಲ್ಲ ಎಂದು ಒಪ್ಪಿಕೊಳ್ಳುತ್ತೀರಾ? ನೀವು ಮಂತ್ರಿಗಳು ಇಂಟರ್‌ಫಿಯರ್ ಮಾಡಬಹುದೇ? ಮೂರು ಮೂರು ತಿಂಗಳಿಗೆ ಟ್ರಾನ್ಸ್‌ಫರ್ ಮಾಡಬಹುದೋ?

ಡಿಸ್ಟ್ರಿಕ್ಟ್ ಹೆಡ್‌ಕ್ವಾರ್ಟರನಲ್ಲಿ ಯಾವಯಾವ ಕಮ್ಯುನಿಟಿಯವರು ಡೆಪ್ಯುಟಿ ಕಮಿಷನರಾಗಿ ಎಷ್ಟು ಜನ ಇಂಡಿಪೆಂಡೆಂಟ್ ಚಾರ್ಜ್‌ನಲ್ಲಿದ್ದಾರೆ ಎಂದು ಹೇಳಿ. ಎಲ್ಲರನ್ನೂ ತೆಗೆದು ಬಿಡಿ, ಯಾವುದಾದರೂ ಒಂದು ಕಮ್ಯುನಿಟಿ ಇಟ್ಟುಕೊಳ್ಳಿ ಯಾವುದೋ ಪ್ಯೂನಿಟಿವ್ ಟ್ಯಾಕ್ಸ್ ಕಲೆಕ್ಟ್ ಮಾಡುತ್ತಿದ್ದಾರೆಯೇ ಎಂದು ಪ್ರಶ್ನೆ ಕೇಳಿದಾಗ ಪ್ಯೂನಿಟವ್ ಟ್ಯಾಕ್ಸ್ ಕಲೆಕ್ಟ್ ಮಾಡುತ್ತಿಲ್ಲ. ಅಲ್ಲಿ ಪೋಲೀಸ್ ಇಟ್ಟಿದ್ದೇವೆ ಅವರ ಖರ್ಚನ್ನು ತೆಗೆದುಕೊಳ್ಳುತ್ತಿದ್ದೇವೆ ಎಂದು ಹೇಳಿದರು. ಈ ದೇಶದಲ್ಲಿ ಕಮ್ಯೂನಲ್‌ರೈಟ್ಸ್ ಆದಾಗ ಪ್ಯೂನಿಟಿವ್ ಟ್ಯಾಕ್ಸ್ ಹಾಕಿದ್ದೀರಾ ಎಂದರೆ ಇಲ್ಲ. ಹಾಕುವುದಕ್ಕೆ ನಿಮಗೆ ಧೈರ್ಯವಿಲ್ಲ; ನಿಮಗೆ ಗಂಡಸುತನವಿಲ್ಲ. ನೀವು ಏನು ಮಾಡುತ್ತೀರಿ. ನಿಮಗೆ ಯಾರು ಬೇಕೋ ಅವರಿಗೆ ಅನುಕೂಲವಾಗುವಂತೆ ಮಾಡುತ್ತೀರಿ. ನಿಮ್ಮ ಪಕ್ಷಕ್ಕೆ ಬೆಂಬಲಬೇಕು. ಎಲ್ಲರೂ ಒಂದು ದಿನ ಸಾಯಬೇಕಾಗಿದೆ. ಹುಟ್ಟುವಾಗ ಏನೂ ತರುವುದಿಲ್ಲ. ಸತ್ತು ಹೋದಾಗ ಏನೂ ತೆಗೆದುಕೊಂಡು ಹೋಗುವುದಿಲ್ಲ. ಕರಪ್ಷನ್ ಕಡಿಮೆ ಮಾಡಲು ವಿಜಿಲೆನ್ಸ್ ಕಮಿಷನ್ ಮಾಡಿದ್ದೀರಿ. ಆದರೆ ಏನಾಗಿದೆ? ಒಬ್ಬ ಎಕ್ಸೈಜ್, ಇನ್ಸ್‌ಪೆಕ್ಟರು ಸತ್ತುಹೋದ. ಶ್ರೀರಾಮರಾಯರ ಕ್ಷೇತ್ರವಾದ ತುಮಕೂರು ಜಿಲ್ಲೆಯಲ್ಲಿ ಸತ್ತು ಹೋದ ಸತ್ತು ಎಂಟು ವರ್ಷವಾಯಿತು. ಸ್ಪೆಷಲ್ ಆಫೀಸರ್ ಫಾರ್ ಫೈನಾನ್ಷಿಯಲ್ ಸೆಕ್ರೆಟರಿ, ಫೈನಾನ್ಸ್ ಡಿಪಾರ್ಟ್‌ಮೆಂಟ್, ಡೆಪ್ಯುಟಿ ಕಮಿಷನರ್ ಮತ್ತು ತಹಸೀಲ್ದಾರ್ ಎಲ್ಲರಿಗೂ ಬರೆದಿದ್ದಾರೆ. ಆತನ ಹೆಂಡತಿ ಪೆನ್‌ಷನ್ಗೆ ಅರ್ಜಿ ಹಾಕಿದ್ದಾಳೆ. ಇದರ ಬಗ್ಗೆ ಕೇಳಿದರೆ ಬರಾವರ್ದ್ ಕಳಿಸಿಕೊಡಿ ಎಂದು ತಹಸೀಲ್ದಾರರಿಗೆ ಬರೆದಿದ್ದೇವೆ. ಅವರಿಂದ ಇನ್ನೂ ಬಂದಿಲ್ಲ ಎಂದು ಹೇಳುತ್ತಾರೆ. ನಿಮ್ಮ ಇಲಾಖೆಯಲ್ಲಿ ಕೆಲಸ ಮಾಡಿ ಸತ್ತುಹೋದವನ ಹೆಂಡತಿ ಮಕ್ಕಳು ಹೊಟ್ಟೆ ಬಟ್ಟೆಗೆ ಇಲ್ಲದೆ ಸಾಯುತ್ತಿದ್ದಾರೆ. ಸರ್ಕಾರದಲ್ಲಿ ಆಫೀಸರುಗಳ ಮೇಲೆ ಆಫೀಸರುಗಳನ್ನು ನೇಮಕ ಮಾಡುತ್ತಿದ್ದೀರಿ ಇದು ಸರಿಯಲ್ಲ. ನಿಮ್ಮ 'ಎ' ಕ್ಲಾಸ್ ಅಧಿಕಾರಿಗಳನ್ನು ಕಡಿಮೆ ಮಾಡಿ ಸರಿಯಾದ ಕೆಲಸ ತೆಗೆದುಕೊಂಡು ಚೆನ್ನಾಗಿ ಆಡಳಿತ ಮಾಡಿ. ಬದನೇಕಾಯಿ ಮೇಲೆ ತೊಟ್ಟು ಇರುವ ಹಾಗೆ ನೀವು ಇಲ್ಲಿದ್ದೀರಿ. ನಿಮ್ಮಲ್ಲಿ ಭ್ರಾತಿ ಇಲ್ಲ. ನೀವು ಮಾಡುವುದನ್ನು ಅವರು ಒಪ್ಪಿಕೊಳ್ಳುವುದಿಲ್ಲ. ಅವರು ಮಾಡುವುದನ್ನು ನೀವು ಒಪ್ಪಿಕೊಳ್ಳುವುದಿಲ್ಲ. ನಿಮ್ಮಲ್ಲೇ ಅಲ್ಲೋಲಕಲ್ಲೋಲವಾಗುತ್ತಿದೆ.

ವ್ಯವಸಾಯವನ್ನು ತೆಗೆದುಕೊಳ್ಳಿ, ಗ್ರಾಂಟ್ ಆಫ್ ಲ್ಯಾಂಡ್ ತೆಗೆದುಕೊಳ್ಳಿ, ಎಲ್ಲದರಲ್ಲಿಯೂ ಒಂದು ನೀತಿ ಇಲ್ಲ. ರೆವೆನ್ಯೂ ಮಿನಿಸ್ಟರ್ ಸಾಹೇಬರು ಒಂದೊಂದು ಭೂಮಿಯನ್ನು ಹತ್ತು ಹತ್ತು ಜನಗಳಿಗೆ ಗ್ರಾಂಟ್ ಮಾಡಿದ್ದಾರೆ. ಜತ್ತಿ ಸಾಹೇಬರು ಹೇಳಿದರು, ಡಿಕ್ಲರೇಷನ್ ಮಾಡದೆ ಇರುವುದರಿಂದ ಪ್ರೊಕ್ಯೂರ್‌ಮೆಂಟ್ ಮಾಡಿದ್ದಾರೆ ಅಪೀಲ್ ಮಾಡಬಹುದು ಎಂದು ಹೇಳಿದರು. ಅಪೀಲ್ ಮಾಡಬೇಕಾದರೆ ಸುಮ್ಮನೆ ಆಗುತ್ತದೆಯೇ? ಮೈಸೂರಿನಿಂದ ಬೆಂಗಳೂರಿಗೆ ಬರಬೇಕು, ಲಾಯರಿಗೆ ಫೀಸು ಕೊಡಬೇಕು, ನೀವು ಮಾಡಿದ ಆಕ್ಟ್‌ಗಳನ್ನೆಲ್ಲ ಲಾಯರುಗಳಿಗೆ ಅನುಕೂಲವಾಗುವ ಹಾಗೆ ಮಾಡುತ್ತೀರಿ. ಎಲ್ಲ ಉಲ್ಟಾಪಲ್ಟಾ ಮಾಡುತ್ತೀರಿ. ಇದರಿಂದ ನಿಮಗೆ ಏನಾಯಿತು, ಏನೂ ಆಗಲಿಲ್ಲ. ನಾವು ಹಾಳಾಗುತ್ತೇವೆ. ನ್ಯಾಯವಿಲ್ಲ, ಧರ್ಮವಿಲ್ಲ, ಸತ್ಯವಿಲ್ಲ, ಏನೂ ಇಲ್ಲ. ಇವು ನಿಮ್ಮಲ್ಲಿ ಇವೆ ಎಂದರೆ ಸರಿಯಾಗಿ ಕೆಲಸ ಮಾಡಿ, ಕೈಗಾರಿಕೆ ಇಲಾಖೆಯ ಮುಖ್ಯಸ್ಥರು, ಅಗ್ರಿಕಲ್ಚರಲ್ ಇಲಾಖೆಯ ಮುಖ್ಯಸ್ಥರು ಅಥವಾ ಬೇರೆಯವರು ಯಾರೇ ಇರಲಿ ಅವರು ತಪ್ಪು ಮಾಡಿದರೆ ಅವರನ್ನು ಸ್ಯಾಕ್ ಮಾಡಿ, ಅವರ ಮೇಲೆ ಕ್ರಮ ತೆಗೆದುಕೊಳ್ಳಿ ನೀವು ಹಾಗೆ ಮಾಡುವುದಿಲ್ಲ. ಪಸ್ಟ್ ಡಿವಿಜನ್ ಕ್ಲರ್ಕ್, ಸೆಕೆಂಡ್ ಡಿವಿಜನ್ ಕ್ಲರ್ಕ್, ಪ್ಯೂನ್ ಇಂಥವರನ್ನು ಮಾತ್ರ ಸ್ಯಾಕ್ ಮಾಡುತ್ತೀರಿ. ಆದರೆ ಅಧಿಕಾರಿಗಳು ನಿಮ್ಮ ಜೊತೆಯಲ್ಲೇ ಇರುತ್ತಾರೆ. ಅವರನ್ನು ಹಿಡಿಯುವ ಗಂಡಸುತನ ನಿಮ್ಮಲ್ಲಿದೆಯೇ? ನೀವು ರಾಜ, ಅವರು ಮಂತ್ರಿ ನಾವು ಬಾಜಬಜಂತ್ರಿ ಬಾರಿಸುವುದಕ್ಕೆ ಇದೇವೇನ್ರೀ? ಹೇಳುತ್ತ ಹೋದರೆ ದೊಡ್ಡ ಚರಿತ್ರೆ ಆಗುತ್ತದೆ. ಕಾವೇರಿ ನದಿಯಲ್ಲಿರುವ ನೀರನ್ನೆಲ್ಲಾ ಮಸಿ ಮಾಡಿ ಬರೆದರೂ ನಿಮ್ಮ ಹರಿಕಥೆ ಮುಗಿಯುವುದಿಲ್ಲ. ಎಷ್ಟು ವರ್ಷ ಹೇಳಿದರೂ ಏನೂ ಆಗುವುದಿಲ್ಲ. ನಾನು ಸುಲಭವಾಗಿ ಹೇಳಿ ಮುಗಿಸುತ್ತೇನೆ.

ಕೆಲವರು ಮಂತ್ರಿಗಳಲ್ಲಿ ಒಂದು ಭಾವನೆ ಬಂದಿದೆ. ನಾನು ಬಡವ ಇಲ್ಲಿ ನಿಂತುಕೊಂಡು ಮಾತನಾಡುತ್ತಿದ್ದೇನೆ. ತಮ್ಮ ತಲೆ ಮೇಲೆ ತಕ್ಕಡಿ ಇದೆ. ಆದ್ದರಿಂದ ನ್ಯಾಯವಾಗಿ ನಡೆಯಬೇಕು. ಕೆಲವು ಮಂತ್ರಿಗಳು ಏನು ಮಾಡುತ್ತಾರೆಂದರೆ ಹೆಡ್ ಆಫ್‌ದಿ ಡಿಪಾರ್ಟ್‌ಮೆಂಟ್, ಹೆಡ್ ಆಫ್ ದಿ ಡಿಸ್ಟ್ರಿಕ್ಟ್ ಅವರಿಗೆ ಬರೆದು ಅಜೀಜ್ ಸೇಟ್ ಬಂದರೆ ಏನೂ ಕೆಲಸ ಮಾಡಿಕೊಡಬೇಡಿ ಎಂದು ಕಾನ್‌ಫಿಡೆನ್ಷಿಯಲ್ ಲೆಟರ್ ಬರೆಯುತ್ತಾರೆ. ಇದು ಯಾವ ಧರ್ಮ, ಯಾವ ನ್ಯಾಯ? ನೀವು ಹೇಳಿದ ತಕ್ಷಣ ಆ ರೀತಿ ಮಾಡಿದರೆ ಅವರು ಎಂಥ ಮುಟ್ಠಾಳರಾಗುತ್ತಾರೆ? ಕೋರ್ಟಿಗೆ ಹೋದರೆ ಏನು ಮಾಡುತ್ತಾರೆ? ಏನೂ ಮಾಡುವುದಕ್ಕಾಗುವುದಿಲ್ಲ. ಅವರವರ ಜವಾಬ್ದಾರಿ ಅವರವರು ನೋಡಿಕೊಳ್ಳುತ್ತಾರೆ. ನೀವು ಇಂಟರ್‌ಫಿಯರ್ ಜಾಸ್ತಿ ಮಾಡುತ್ತಿದ್ದೀರಿ. ನೀವು ಇಂಟರ್‌ಫಿಯರ್ ಮಾಡುವುದು ಸರಿಯಲ್ಲ. ಅಧಿಕಾರಿಗಳು ಸತ್ಯದಿಂದ, ಧರ್ಮದಿಂದ, ನ್ಯಾಯದಿಂದ ಕೆಲಸ ಮಾಡಬೇಕು. ಯಾರಾದರೂ ಲೋಪ ಮಾಡಿದರೆ ಅವನಶಷ್ಟು ದೇಶ ದ್ರೋಹಿ ಯಾರೂ ಇಲ್ಲ ಎಂದು ಹೇಳುತ್ತೇನೆ.

1947ನೇ ಇಸವಿಯಲ್ಲಿ ನಾನು ನೋಡಿರುವ ಹಾಗೆ ಕೆಲವು ಮಂತ್ರಿಗಳಿಗೆ ಮತ್ತು ಕಾಂಗ್ರೆಸ್ ಮೆಂಬರುಗಳಿಗೆ ಕುಳಿತುಕೊಳ್ಳುವುದಕ್ಕೆ ಸೈಕಲ್ ಗತಿ ಇರಲಿಲ್ಲ. ಮೋಟಾರ್ ಕಾರು ನೋಡಿರಲಿಲ್ಲ. ಬೋಲ್ಟ್, ನಟ್ ಅಂದರೆ ಯಾವುದು ಎಂದು ಗೊತ್ತಿರಲಿಲ್ಲ. ಅಂಥವರು ಈಗ ಕಂಪನಿಗಳಲ್ಲಿ 20 ಲಕ್ಷ 30 ಲಕ್ಷ, 50 ಲಕ್ಷ ರೂಪಾಯಿಗಳ ಷೇರು ಹೋಲ್ಡರುಗಳಾಗಿದ್ದಾರೆ. ಬೊಂಬಾಯಿನಲ್ಲಿ ಮನೆಗಳಿವೆ, ಮದ್ರಾಸಿನಲ್ಲಿ ಮನೆಗಳಿವೆ, ಬೆಂಗಳೂರಿನಲ್ಲಿ ಮನೆಗಳಿವೆ. ಇದೇನು ಅವರಮ್ಮನ ಮನೆಯಿಂದ ಬಂತೇ, ಅವರಪ್ಪನ ಮನೆಯಿಂದ ಬಂತೇ, ಅವರ ಹೆಂಡತಿ ಮನೆಯಿಂದ ಬಂತೇ ಇದನ್ನೆಲ್ಲ ಸ್ಕ್ರೀನ್ ಮಾಡಿ ಪತ್ತೆ ಹಚ್ಚಬೇಕು.

ಖೋಟಾ ನೋಟು ತಯಾರಿಕೆ ಹೆಚ್ಚಾಗುತ್ತಿದೆ. ಇವರ ಕ್ಯಾಬಿನೇಟ್‌ನಲ್ಲಿರುವವರು ಇದಕ್ಕೆ ಸಹಾಯ ಮಾಡಿದ್ದಾರೆ. ಅವರನ್ನು ಧೈರ್ಯದಿಂದ ತೆಗೆದು ಹಾಕಬೇಕು. ಅವರು ಗಾಂಧಿ ಭಕ್ತರು. ಅವರ ಮೇಲೆ ಬಹಳ ವಿಶ್ವಾಸವಿದೆ. ಇವರ ಮೇಲೆ ಅವರಿಗೆ ಅಪಾರವಾದ ಭಕ್ತಿ. ಮನುಷ್ಯ ಮಾತ್ರ ಚಿನ್ನ, ಕಿವಿ ಹಿತ್ತಾಳೆಯದು. ನಿಜಲಿಂಗಪ್ಪನವರಲ್ಲಿರುವ ವೀಕ್‌ನೆಸ್ ಇದು. ಅವರ ಕಿವಿ ಹಿತ್ತಾಳೆ ಕಿವಿ. ಅವರು ಬಹಳ ಒಳ್ಳೆಯವರು. ಯಾರು ಹೇಳಿದರೂ ಕೇಳುತ್ತಾರೆ. ಖೋಟಾ ನೋಟು ತಯಾರಿಕೆಗೆ ಸಹಾಯ ಮಾಡಿದ ಯಾವ ಮಂತ್ರಿಗಳಿದ್ದಾರೆ ಅವರನ್ನು ತೆಗೆಯಬೇಕು. ಹೋಮ್ ಮಿನಿಸ್ಟ್ರಿಯಿಂದ ಒಂದು ಕಾಗದ ಬಂದಿದೆ. ನಿಮ್ಮವರು ಇಂಥವರು ಖೋಟಾ ನೋಟು ತಯಾರಿಕೆಯಲ್ಲಿ ಇನ್‌ವಾಲ್ವ್ ಆಗಿದ್ದಾರೆ ಎಂದು. ಅವರನ್ನು ಮೊದಲು ಧೈರ್ಯದಿಂದ ತೆಗೆಯಬೇಕು. without favour or fear.

ಆರಿಸ್ಟೋಕ್ರಟಿಕ್ ಅಫಿಷಿಯಲ್ಸ್ ಯಾರಿದ್ದಾರೆ ಅವರನ್ನು 20-25 ವರ್ಷ ಸರ್ವಿಸ್ ಆಗಿರುವವರನ್ನು ಕಂಪಲ್ಸರಿಯಾಗಿ ರಿಟೈರ್ ಮಾಡಬೇಕು ಅಥವಾ ಅವರನ್ನು ಕೆಲಸದಿಂದ ವಜಾಮಾಡಬೇಕು; ಅವರನ್ನು ಮನೆಗೆ ಕಳಿಸಬೇಕು. ಇಷ್ಟೊಂದು ಮಾಡಿದರೆ ಅವರಿಗೆ ತಾವು ಹೇಗೆ ಇರಬೇಕೆಂದು ಅರ್ಥವಾಗುತ್ತದೆ. ಒಂದು ಸರ್ಕ್ಯುಲರ್ ಕಳಿಸುವುದರಿಂದ ಏನೂ ಅರ್ಥವಾಗುವುದಿಲ್ಲ. ಲೆಜಿಸ್ಲೇಟರ್ ಬಂದರೆ ಎದ್ದು ನಿಂತುಕೊಂಡು ಪರಾಕ್ ಹೇಳುವುದು ನಮಗೆ ಬೇಡ ಆದರ ನಾವು ಯಾರಾದರೂ ಹೋದಾಗ ವಿನಯದಿಂದ ನಾವು ಹೇಳುವುದನ್ನು ಕೇಳಬೇಕು.

ನಾನು ಹಿಂದೆ ಒಂದು ಸಲ ಮುಖ್ಯಮಂತ್ರಿಗಳನ್ನು ನನಗೆ ಐದು ಟನ್ ಸ್ಟೀಲ್ ಕೋಟಾ ಕೊಡಿ ಸಾಕು ಎಂದು ಕೇಳಿದೆ. ಕೊಟ್ಟರೆ ಏನು ಮಾಡುತ್ತೀರಿ ಎಂದು ಕೇಳಿದರು. ಐದು ಟನ್ ತೆಗೆದುಕೊಂಡು ಏನೂ ಮಾಡುವುದಿಲ್ಲ. ಒಂದು ಕೈಗಾರಿಕೆ, ಒಂದು ಕಾರ್ಖಾನೆ ಏನೂ ಮಾಡುವುದಿಲ್ಲ. ಏನೋ ನೀವು ಮನಸ್ಸು ಮಾಡಿ ಕೊಟ್ಟರೆ ನಾನು ಬದುಕಿ ಕೊಳ್ಳುತ್ತೇನೆ. ಒಂದು ಟನ್ನಿಗೆ ಐದು ಸಾವಿರ ರೂಪಾಯಿ ಸಿಕ್ಕುತ್ತದೆ. ಐದು ಟನ್ ಮಾರಿದರೆ 25 ಸಾವಿರ ರೂಪಾಯಿ ಆಗುತ್ತದೆ. ವರ್ಷಕ್ಕೆ ನಾಲ್ಕು ಕೋಟಾ ಬರುತ್ತದೆ. ಎಂದರೆ ಒಂದು ವರ್ಷಕ್ಕೆ

ಒಂದು ಲಕ್ಷ ರೂಪಾಯಿ ಆಯಿತು. ಮೊದಲನೆ ವರ್ಷ ಸಾಲ ತೀರಿಸಿಕೊಳ್ಳುತ್ತೇನೆ. ಎರಡನೆ ವರ್ಷಮನೆ ಮಠ ಮಾಡಿಕೊಳ್ಳುತ್ತೇನೆ, ಮೂರನೆ ವರ್ಷ ಬಂಡವಾಳ ಮಾಡಿಕೊಳ್ಳುತ್ತೇನೆ, ಇಷ್ಟು ಮಾಡಿ ಎಂದು ಹೇಳಿದಾಗ You have become very mischievous' ಎಂದು ಹೇಳಿದರು. ಈ ರೀತಿ ತಮ್ಮ ರಾಜ್ಯದಲ್ಲಿ ಆಡಳಿತ ನಡೆಯುತ್ತಿದೆ. ಎಚ್ಚರಿಕೆಯಿಂದ ಇರಿ. ನಿಮ್ಮ ಹಿಂಬಾಲಕರು ಇದ್ದಾರೆ ನೋಡಿ, ತಬಲ ಬಾರಿಸುವವರು ಎದ್ದೆದ್ದು ಮಧ್ಯದಲ್ಲಿ ಮಾತನಾಡುವವರು ಅವರ ವಿಚಾರದಲ್ಲಿ ಎಚ್ಚರಿಕೆಯಿಂದ ಇರಿ. ನಾನು ಬಿಕ್ಕಟ್ಟಾಗಿ ಹೇಳುತ್ತೇನೆ. ನಿಜಲಿಂಗಪ್ಪನವರಿಂದ ನಿಜವಾಗಿಯೂ ದೇಶಕ್ಕೆ ಒಳ್ಳೆಯದಾಗಬೇಕು. ಅವರ ಮೇಲೆ ಯಾವ ರೀತಿಯ ಟೀಕೆಯೂ ಬರಬಾರದು ಎಂದರೆ ಅವರು ಕ್ಯಾಬಿನೆಟ್‌ನಲ್ಲಿ ಮೊದಲು ಸ್ಕ್ರೀನ್ ಮಾಡಿ, ಖೋಟಾ ನೋಟು ತಯಾರಿಕೆಯಲ್ಲಿ ಸಹಾಯ ಮಾಡಿದವರನ್ನು ಕೂಡಲೇ ತೆಗೆಯಲಿ ಎಂದು ಕೇಳಿ, ಇಷ್ಟು ಅವಕಾಶ ಕೊಟ್ಟದ್ದಕ್ಕೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಮಾನ್ಯ ನಿಜಲಿಂಗಪ್ಪನವರ ಮಂತ್ರಿಮಂಡಲದ ಮೇಲಿನ ಅವಿಶ್ವಾಸ ನಿರ್ಣಯವನ್ನು ಬೆಂಬಲಿಸುತ್ತಾ ಮಾಡಿದ ಭಾಷಣ

ಶ್ರೀ ಅಜೀಜ್ ಸೇಟ್:- ನನ್ನ ಮಿತ್ರರಾದ ಶ್ರೀಮಾನ್ ಸೋಗಿಯವರು ಹೇಳಿದರು. ನೊಕಾನ್‌ಫಿಡೆನ್ಸ್ ಮೋಷನ್ ಏನು ತೆಗೆದುಕೊಂಡು ಬಂದಿದ್ದೇವೆ ಅದು ಒಂದು ಕೀಳು ದರ್ಜೆಯ ರೋಗ ಎಂದು ಸ್ವಾಮಿ, ವಿಶಾಲ ಮೈಸೂರಿನಲ್ಲಿ ನಾವು ಜನ ಸೇವೆಯೇ ಜನಾರ್ಧನಸೇವೆ ಎಂದು ಮರ್ಯಾದೆ ಇಟ್ಟುಕೊಂಡು ಮಹಾತ್ಮಾ ಗಾಂಧಿಯವರ ಫೋಟೋವನ್ನು ತಲೆಮೇಲಕ್ಕೆ ಇಟ್ಟುಕೊಂಡು ಪ್ರೈಮ್ ಮಿನಿಸ್ಟರ್ ಜವಹರ್‌ಲಾಲ್ ನೆಹರೂರವರ ಫೋಟೋ ಇಟ್ಟುಕೊಂಡು ಈಗ ಉಂಟಾಗಿರುವ ವಾತಾವರಣ ನೋಡಿದರೆ, ನಾಚಿಕೆಯಾಗುತ್ತದೆ. ನಾನು ಹೇಳಿದ ವಾದ ಸರಿಯಾಗಿದೆಯೇ, ಇಲ್ಲವೋ ಎಂದು ಪರಿಶೀಲನೆ ಮಾಡಿದರೆ ನನ್ನ $2^1/_2$ ವರ್ಷದ ಗುರುಗಳಾದ ಶ್ರೀಮಾನ್ ನಿಜಲಿಂಗಪ್ಪನವರು ತಕ್ಷಣ ರಾಜೀನಾಮೆ ಕೊಡಬೇಕೆಂದು ಹೇಳುತ್ತೇನೆ. ಏತಕ್ಕೆ ಈ ರೀತಿ ಅಜೀಜ್ ಸೇಟ್ ಹೇಳುತ್ತಾ ಇರುವುದು ಎನ್ನುವುದನ್ನು ಕೇಳಬಹುದು. ನಾನು 1960ನೇ ಇಸವಿಯಿಂದ ವಿಧಾನ ಪರಿಷತ್ತಿನ ಸದಸ್ಯ. 1963ನೇ ಇಸವಿಯಲ್ಲಿ ಇದೇ ಮುಖ್ಯಮಂತ್ರಿಗಳಲ್ಲಿ ನನಗೆ ಲೆಜಿಸ್ಲೇಚರ್ ಕೋಟಾದಿಂದ ಫಿಯೇಟ್ ಮೋಟಾರ್ ಕಾರ್ ಪರ್ಮಿಟ್ ಕೊಡಿಸಿಕೊಡಿ ಎಂದು ಪ್ರಾಕ್ಟಿಕಲ್ ಆಗಿ ರೆಕಾರ್ಡ್ ರೆಫರೆನ್ಸ್‌ನಿಂದ ಹೇಳುತ್ತಿದ್ದೇನೆ. ಆಗ ಕಾರ್ ಬೇಕೆಂದು ಕೇಳಿದರೂ ಇನ್ನು 1967ನೇ ಇಸವಿಯಾದರೂ ನನಗೆ ಕಾರ್ ಕೊಡಿಸಲಿಲ್ಲ. ನಿನ್ನೆ ಮೊನ್ನೆ ಕಾಂಗ್ರೆಸ್ ಟಿಕಟ್ ಮೇಲೆಗೆದ್ದು ಬಂದಿರುವವರಿಗೆ ಅವರ ಪಕ್ಷ ಬಲವಾಗಿ ಇರಬೇಕು ಎಂದು ಹೇಳಿ, ನಿನ್ನೆ ಹಾಕಿದ್ದ ಅಪ್ಲಿಕೇಷನ್‌ಗೆ ಇವೊತ್ತು ಸಾಂಕ್ಷನ್ ಆಗಿದೆ. ಎಷ್ಟೋ ಕಾಂಗ್ರೆಸ್ ಸದಸ್ಯರು, ಸ್ಕೂಟರ್ಸ್, ಫಿಯೆಟ್ ಕಾರ್ಸ್ ತೆಗೆದುಕೊಂಡು ಮಾರಾಟ ಮಾಡಿದ್ದಾರೆ, ಎಷ್ಟು ಮಂತ್ರಿಗಳು ತೆಗೆದುಕೊಂಡಿದ್ದಾರೆ ಎಂದು ಹೇಳಲಿ? ನಮ್ಮಲ್ಲಿ ಒಂದು ಗಾದೆ ಇದ್ದ ಹಾಗೆ ಮನೆ ಆಸ್ತಿ ಇದ್ದರೆ ಲೆಕ್ಕಹಾಕುತ್ತಾರೆ. ಬೇರೆ ಯಾರಾದರೂ ಕೊಟ್ಟರೆ ಅವರ ಮನಸ್ಸಿಗೆ ಬಂದಹಾಗೆ ಖರ್ಚು ಮಾಡುತ್ತಾರೆ. ಈ ಒಂದು ವಿಷಯವನ್ನು ತಾವು ಸ್ವಲ್ಪ ದೀರ್ಘವಾಗಿ ಯೋಚನೆ ಮಾಡಬೇಕು. ಸ್ವಾಮೀ, ಇವೊತ್ತು ಎಲ್ಲರಿಗೂ ಗೊತ್ತಿರುವಹಾಗೆ ಈ ವಿಧಾನಸೌಧವನ್ನು ಕಟ್ಟಿಸಿದಂತಹ ಶ್ರೀಮಾನ್ ಹನುಮಂತಯ್ಯನವರು ಇಂದು ಈ ಸಭೆಗೆ ಬಂದಿದ್ದಾರೆ. ವಿಧಾನ ಸೌಧದಂತಹ ಕಟ್ಟಡ ನಮ್ಮ ಮೈಸೂರು ದೇಶದಲ್ಲಿ ಎಲ್ಲಿಯೂ ಇಲ್ಲ ಎಂದು ಎಲ್ಲರೂ ಕೊಂಡಾಡುತ್ತಿದ್ದಾರೆ ಮತ್ತು ನಮ್ಮ ದೇಶಕ್ಕೆ ಬಹಳ ಉಪಕಾರ ಮಾಡಿದಂತಹವರು.

**Mr. SPEAKER.-** There should be no reference to anybody who is outside the House.

ಶ್ರೀ ಅಜೀಜ್ ಸೇಟ್.- ಅವರು ಎಕ್ಸ್ ಚೀಫ್ ಮಿನಿಸ್ಟರಾಗಿದ್ದವರು ಎಂದು ಹೇಳುತ್ತೇನೆ. ತಾವು ಸ್ವಲ್ಪ ಈ ಸಭೆಯಲ್ಲಿ ಸಾವಧಾನದಿಂದ ಕುಳಿತುಕೊಳ್ಳಬೇಕು.

**Mr. SPEAKER.-** Members should not address such requests to the Chair.

Mr. AZEEZ SAIR.- May I request that I may not be interrupted Sir Words can be twisted in any manner.

ಸ್ವಾಮೀ, ಹೆಸರನ್ನು ಹೇಳುವುದಕ್ಕೆ ಹೋಗುವುದಿಲ್ಲ. ಹಿಂದೆ ಈ ರಾಜ್ಯದ ಮಾಜೀ ಮುಖ್ಯಮಂತ್ರಿಗಳಾಗಿದ್ದಂತಹವರು ಇಂತಹ ಒಂದು ಒಳ್ಳೆಯ ವಿಧಾನ ಸೌಧದಂತಹ ಕಟ್ಟಡವನ್ನು ಕಟ್ಟಿ ಇಂತಹ ಒಂದು ಕ್ಯಾಬಿನೆಟ್ ರೂಂ ಎಂದು ಮಾಡಿದರೂ ಅವರು ಒಂದು ದಿನ ಕೂಡ ಈ ವಿಧಾನ ಸೌಧದಲ್ಲಿ ಕೂಡುವಂತೆ ಅವರಿಗೆ ಅವಕಾಶ ಮಾಡಿಕೊಡಲಿಲ್ಲ. ಇವರ ಹೆಸರು ಎಲ್ಲರಿಗೂ ತಿಳಿದಿದೆ ಮತ್ತು ನಮ್ಮ ದೇಶಕ್ಕೆ ಬಹಳ ಉಪಕಾರ ಮಾಡಿದಂತಹವರು.

ತಾವು ಇಲ್ಲಿ ಡೆಮಾಕ್ರಸಿ ಎಂದು ಹೇಳುತ್ತೀರಿ. ಅದು ಹೇಗಿದೆ ಎಂದರೆ: Government by the people, of the people and for the people. But it may be said like this which is very appropriate in the present circumstances. Government buy the people, off the people, far from the people, ಇಲ್ಲಿ ಕೆಲವು ಮಂತ್ರಿಗಳು ಮಾಡುತ್ತಿರುವ ವಾದಗಳನ್ನು ನೋಡಿದರೆ ಇದು ಮಾನ್ಯ ನಿಜಲಿಂಗಪ್ಪನವರಿಗೆ ಬರುತ್ತದೆಯೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ. ಉದಾಹರಣೆಯಾಗಿ ಇಲ್ಲಿ ಹೇಳಬೇಕಾದರೆ ನಮ್ಮ ಮಾನ್ಯ ಮುಖ್ಯಮಂತ್ರಿಗಳು ಕಾಂಗ್ರೆಸು ಪಕ್ಷದಿಂದ ಗೆದ್ದಂತಹವರು ಎಂದು ಇಲ್ಲಿ ಬಂದು ಆಡಳಿತದಲ್ಲಿದ್ದಾರೆ. ಅದೇ ರೀತಿ ನಾವೂ ವಿರೊಧ ಪಕ್ಷದಿಂದ ಗೆದ್ದು ಈ ಸಭೆಯಲ್ಲಿ ಸದಸ್ಯರಾಗಿದ್ದೇವೆ. ಆದರೆ ಕಾಂಗ್ರೆಸ್ ಪಕ್ಷದಿಂದ ಗೆದ್ದು ಬಂದು ಇಲ್ಲಿ ಮುಖ್ಯ ಮಂತ್ರಿಗಳಾದ ಮೇಲೆ ಅವರು ಕಾಂಗ್ರೆಸ್ ಪಕ್ಷದ ಮುಖ್ಯ ಮಂತ್ರಿಗಳೇ ಅಲ್ಲ ಅವರು ಎಲ್ಲ ದೇಶದ ಜನತೆಗೆ ಸೇರಿದಂತಹ ಮುಖ್ಯಮಂತ್ರಿಗಳು ಎನ್ನುವುದನ್ನು ತಿಳಿದುಕೊಳ್ಳಬೇಕು. ಡೆಮಾಕ್ರಸಿ ಫಾರ್ ಕಾಂಗ್ರೆಸ್ ಎಂದು ಎಲ್ಲಿಯೂ ಹೇಳಿಲ್ಲ. ಕಾಂಗ್ರೆಸ್ ಪಕ್ಷದಿಂದ ಬಂದಿದ್ದರೆ ಇರಬಹುದು. ಅವರು ದೇಶದ ಮುಖ್ಯಮಂತ್ರಿಗಳಾದಮೇಲೆ ಅವರು ಎಲ್ಲ ಪಕ್ಷಗಳವರಿಗೂ ಸೇರಿದಂತಹ ಮುಖ್ಯಮಂತ್ರಿಗಳಾಗಿರುತ್ತಾರೆ. ಇವರು ಕಾಂಗ್ರೆಸ್ ಪಕ್ಷಕ್ಕೇ ಸೇರಿದ ಮುಖ್ಯಮಂತ್ರಿಗಳಲ್ಲ. ಎಲ್ಲ ಪಕ್ಷಗಳಿಗೂ ಸೇರಿದಂತಹ ದೇಶದ ಮುಖ್ಯಮಂತ್ರಿಗಳು ಎನ್ನುವುದನ್ನು ಅವರೂ ತಿಳಿದುಕೊಳ್ಳಬೇಕು. ಇದನ್ನು ಪುಷ್ಟೀಕರಿಸುವುದಕ್ಕಾಗಿ ಕೆಲವು ವಿಚಾರಗಳನ್ನು ಇಲ್ಲಿ ಹೇಳುತ್ತೇನೆ. ಹೋದ ಸಾರಿ ಈ ಅಸೆಂಬ್ಲಿಯ ಅಧಿವೇಶನಕ್ಕೆ ನಾನು ಬಂದಿದ್ದಾಗ ನಾನು ಮಾನ್ಯ ಶ್ರೀ ನಿಜಲಿಂಗಪ್ಪನವರಿಗೆ ಮೈಸೂರು ಚೀಫ್ ಮಿನಿಸ್ಟರು ಎಂದು ಒಂದು ಕಾಗದ ಬರೆದು ಹಾಸ್ಪಿಟಲ್ ವರ್ಕರ್ಸ್ ಯೂನಿಯನ್ ಪರವಾಗಿ ಒಂದು ಇನ್‌ವಿಟೇಷನ್‌ನ್ನು ನಾನು ಕಳುಹಿಸಿದ್ದೆ. ಇದನ್ನು ಮಾನ್ಯ ಚೀಫ್ ಮಿನಿಸ್ಟರವರೂ ಅಂಗೀಕಾರ ಮಾಡುತ್ತಾರೆ. ಎಂದು ಊಹಿಸಿದ್ದೆ. ಆದರೆ ನಮ್ಮ ಸ್ಟೇಟಿನಲ್ಲಿ ನಮ್ಮ ಡಿಸ್ಟ್ರಿಕ್ಟ್‌ನಿಂದ ಬಂದಿರುವ ಒಬ್ಬ ಮಂತ್ರಿಗಳು ಎಂದರೆ ಮಂತ್ರಿಗಳಾಗಿರುವ ಶ್ರೀ ಪುಟ್ಟಸ್ವಾಮಿಯವರು

ಚೀಫ್ ಮಿನಿಸ್ಟರವರ ಮೇಲೆ ಇಲ್ಲದ ಪ್ರಭಾವವನ್ನು ಬೀರಿ ಇಲ್ಲಿಗೆ ಹೋಗಬಾರದು ಎಂದು ಮಾಡಿದರು. ಇದರಿಂದ ಇಲ್ಲಿನ ಲೇಬರರುಗಳಲ್ಲಿ ಅವರಿಗಿದ್ದಂತಹ ಉತ್ಸಾಹ ಕಡಿಮೆಯಾಯಿತು. ಮೈಸೂರಿನ ಚೀಫ್ ಮಿನಿಸ್ಟರಾಗಿರುವವರು ಇಲ್ಲಿಗೆ ಬಂದಿದ್ದರೆ ಅವರ ಗೌರವವೇನಾದರೂ ಕಡಿಮೆಯಾಗುತ್ತಿತ್ತೇ? ನಮ್ಮ ಚೀಫ್ ಮಿನಿಸ್ಟರವರ ಜವಾಬ್ದಾರಿಯನ್ನು ಮಾನ್ಯ ಮಂತ್ರಿಗಳಾದ ಶ್ರೀ ಪುಟ್ಟಸ್ವಾಮಿಯವರೇ ವಹಿಸಿಕೊಂಡಂತೆ ಕಾಣುತ್ತದೆ. ಇನ್ನು ನಮ್ಮ ಜಿಲ್ಲೆಯಿಂದಲೇ ಬಂದಿರುವ ಶ್ರೀಮಾನ್ಯ ಪುಟ್ಟಸ್ವಾಮಿಯವರು ಹೇಗಿದ್ದಾರೆನ್ನುವುದಕ್ಕೆ ಅವರ ಲಕ್ಷಣಗಳನ್ನು ಸ್ವಲ್ಪ ಹೇಳಬೇಕಾಗಿದೆ. ಇವರು ಮೊದಲಿಗೆ ಈ ಸರಕಾರದಲ್ಲಿ ಹೌಸಿಂಗ್ ಮಿನಿಸ್ಟರಾಗಿದ್ದರು. ಅವರು ಮಾಡಿರುವ ಕೆಲಸವನ್ನು ನೋಡಿದರೆ ನಾವು ಇನ್ನೊಂದು ಜನ್ಮ ಹುಟ್ಟಿಬಂದರೂ ಅಂತಹ ಕೆಲಸಗಳನ್ನು ಮಾಡಿ ನಾವು ಸ್ಟೇಟ್ ಮಿನಿಸ್ಟರು ಆಗುವ ಹಾಗಿಲ್ಲ. ಇವರ ಲಿಮಿಟ್ ಎಲ್ಲಿಯವರೆಗೆ ಇದೆ ಎಂದರೆ, ಮೈಸೂರು ಡಿಸ್ಟ್ರಿಕ್ಟ್‌ಗೆ ಮಾತ್ರ. ಇವರಿದ್ದಾಗ ಕೆ. ಆರ್. ಮಿಲ್ಸ್ ಲೆಬರ್ ಹೌಸಿಂಗ್ ಕಾಲೋನಿ ಎಂದು ಮಾಡಿದರು. ಇನ್ನು ಈಗಿನ ಮಂತ್ರಿಮಂಡಲದಲ್ಲಿ ಅವರು ಹೆಲ್ತ್ ಮಿನಿಸ್ಟರ್ ಆಗಿದ್ದಾರೆ. ಇದಕ್ಕಾಗಿ ಮೈಸೂರಿನಲ್ಲಿರುವ ಕೃಷ್ಣ ರಾಜೇಂದ್ರ ಆಸ್ಪತ್ರೆ ವಿಚಾರ ಸ್ವಲ್ಪ ಹೇಳುತ್ತೇನೆ. ಈ ಆಸ್ಪತ್ರೆಯಲ್ಲಿ ಒಂದು ಎಕ್ಸರೇ ಯಂತ್ರ ಇದೆ. ಇಲ್ಲಿ ಯಾರಾದರೂ ಹೋಗಿ ಅಲ್ಲಿಂದ ಫಿಲ್ಮ್ ತರಬೇಕಾದರೆ 20 ರೂಪಾಯಿಗಳನ್ನು ಲಂಚ ಕೊಡದೇ ಇದ್ದರೆ ಅವರಿಗೆ ಫಿಲಂಗಳು ಸಿಗುವುದೇ ಇಲ್ಲ. ಇವರು ಅನೇಕ ಬಡ ಕಾರ್ಮಿಕರುಗಳಿಗಾಗಿ ಮನೆಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಇದರಲ್ಲಿ ಹಿಂದೆ ಅವರು ಒಂದು ಸಂಘದ ಮುಖಂಡರಾಗಿದ್ದರು. ಅಂತಹ ಸಂಘದ ಮುಖಂಡರುಗಳು ಯಾರು ಬಂದರೂ ಅವರಿಗೆ ಮನೆಗಳನ್ನು ಕೊಡುತ್ತಿದ್ದಾರೆ. ಇತರೆ ಯಾವ ಬಡ ಕಾರ್ಮಿಕರು ಇಲ್ಲಿ ಮನೆಗಾಗಿ ಬಂದರೆ ಅವರಿಗೆ ಸಿಗುತ್ತಿಲ್ಲ. ಇದು ಇವರ ಆಡಳಿತದ ವೈಖರಿ. ಇವರ ಕಡೆಯ ಕೆಲಸಗಾರರಾಗಿದ್ದರೆ. ಮಾತ್ರ ಅವರಿಗೆ ಮನೆಗಳನ್ನು ಕೊಡಬೇಕೆಂದು ಸೂಚನೆಗಳನ್ನು ಕೊಟ್ಟಿದ್ದರು. ಇದು ಹಿಂದೆ ಹೌಸಿಂಗ್ ಮಂತ್ರಿಗಳಾಗಿದ್ದಾಗ ಅವರು ಮಾಡಿದುದು. ಈ ಸಂಗತಿ ಮಾನ್ಯ ನಿಜಲಿಂಗಪ್ಪನವರಿಗೆ ತಿಳಿದಿಲ್ಲ ಎಂದು ನಾನು ಇಲ್ಲಿ ಹೇಳಬೇಕಾಗಿ ಬಂತು. ಇವರ ಜಾಣತನ ಹೇಗಿದೆ ಎಂದರೆ ಯಾರಿಗೂ ತಿಳಿಯದಂತೆ ಇವರು ಮಾಡಿದರೂ ಅದು ಎಲ್ಲರಿಗೂ ಗೊತ್ತಾಗುತ್ತದೆ. ಎಂದಿದ್ದರೂ ಸತ್ಯಕ್ಕೆ ಹಾಗೂ ಧರ್ಮಕ್ಕೆ ಜಯ ಎನ್ನುವುದು ಎಲ್ಲರೂ ತಿಳಿದುಕೊಂಡೇ ಇದ್ದಾರೆ. ಇವರು ಹಿಂದೆ ಹೌಸಿಂಗ್ ಮಂತ್ರಿಗಳಾಗಿದ್ದ ಕಾಲದಲ್ಲಿ ಮೈಸೂರಿನಲ್ಲಿ ಮುನಿಸಿಪಾಲಿಟಿಯವರು ನೂರು ಮನೆಗಳನ್ನು ಕಟ್ಟಿಸಿದ್ದರೂ ಇದು ಬಹು ದಿನಗಳಿಂದ ಇಲ್ಲಿನ ಬಡ ಜನರಿಗೆ ವಾಸಕ್ಕೆ ಸಿಗಲಿಲ್ಲ. ಆ ಕಾಲದಲ್ಲಿ ಏನು ಪಾಪ ಮಾಡಿದ್ದೇನೋ ನಾನು ಕಾಂಗ್ರೆಸು ಪಕ್ಷದ ಸದಸ್ಯನಾಗಿದ್ದೆ. ಆದ್ದರಿಂದ ನಾನು ಆಗ ಇದ್ದ ಮುಖ್ಯಮಂತ್ರಿಗಳಾಗಿದ್ದ ಶ್ರೀಮಾನ್ ನಿಜಲಿಂಗಪ್ಪನವರಲ್ಲಿ ಇಲ್ಲಿನ ಬಡ ಜನರ ಕಷ್ಟವನ್ನು ತಿಳಿಸಿ ಇದರ ಬಗ್ಗೆ ಒಂದು ಸ್ಟೇ ಆರ್ಡರು ಕೂಡ ಆಗಿತ್ತು. ಆದರೆ ಇದರ ಬಗ್ಗೆ ಮುಂದೆ ಏನೂ ಆಗಲಿಲ್ಲ. ನಾನು ಕಾಂಗ್ರೆಸ್ ಪಕ್ಷವನ್ನು ಬಿಟ್ಟು ಈಚೆಗೆ ವಿರೋಧಪಕ್ಷದಲ್ಲಿದ್ದೇನೆ ಎಂದು ಈಗ ಹೆಲ್ತ್

ಮಿನಿಸ್ಟರಾಗಿರುವ ಪುಟ್ಟಸ್ವಾಮಿಯವರು ಆಗ ಹೌಸಿಂಗ್ ಮಿನಿಸ್ಟರಾಗಿದ್ದವರು. ನಾನು ಈಗ ಕಾಂಗ್ರೆಸು ಪಕ್ಷದಲ್ಲಿ ಇಲ್ಲ ಎಂದು ಹಿಂದೆ ಆಗಿದ್ದ ಸ್ಟೇ ಆರ್ಡರನ್ನು ಇವರು ಬಂದು ಕ್ಯಾನ್ಸಲ್ ಮಾಡಿದರು. ಹೀಗಾದರೆ ಬಡ ಜನರು ಬದುಕುವುದು ತಾನೇ ಹೇಗೆ? ಕಾಂಗ್ರೆಸ್ ಪಕ್ಷಕ್ಕೆ ಸೇರಿದವರಿಗೆ ಮಾತ್ರ ಇಲ್ಲಿ ಮನೆಗಳನ್ನು ಕೊಡಬೇಕು. ಇತರರು ಬಂದರೆ ಅವರಿಗೆ ಕೂಡ ಕೊಡದು ಎಂದು ಹೇಳಿದರೆ ಇದೇನು ಜನಗಳಿಗೆ ಅನುಕೂಲ ಮಾಡುವ ಸರಕಾರವೋ ಇಲ್ಲ ಬೇರೇ ರೀತಿಯಾದ ಸರಕಾರವೋ ನನಗೊಂದೂ ಅರ್ಥವಾಗುತ್ತಿಲ್ಲ. ಕಾಂಗ್ರೆಸ್ಸಿನವರೇನೋ ಬಡವರಿಗೆ ಸಹಾಯ ಮಾಡುತ್ತೇನೆ. ಜನ ಸೇವೆಯೇ ಜನಾರ್ಧನನ ಸೇವೆ ಎಂದು ದೊಡ್ಡದಾಗಿ ಹೇಳುತ್ತಿರುವ ಈ ಸರಕಾರ ಜನಗಳಿಗೆ ಬಹಳ ಬೇಜಾರು ಬರುವಂತೆ ಕೆಲಸ ಮಾಡುತ್ತಿದ್ದಾರೆ. ಕಾಂಗ್ರೆಸ್ ಪಕ್ಷದಲ್ಲಿ ನಾನಿದ್ದಾಗ ಕೊಟ್ಟ ಸ್ಟೇ ಆರ್ಡರನ್ನು ನಾನು ಅಲ್ಲಿ ಈಗ ಇಲ್ಲ ಎಂದು ಈ ಆರ್ಡರನ್ನು ಕ್ಯಾನ್ಸಲ್ ಮಾಡಿದರೆ ನನಗೇನಾಗುತ್ತದೆ ಇಲ್ಲಿರುವ ಬಡ ಜನರಿಗೆ ತೊಂದರೆಯಾಗುತ್ತದೆ. ಬಡಜನರಿಗೆ ಅನುಕೂಲ ಮಾಡದೇ ಇರುವ ಸರಕಾರ ಇದೆಂತಹ ಸರಕಾರ. ಕಾಂಗ್ರೆಸ್ಸಿನವರಿಗೇ ಆದರೆ ಒಂದು ವಾದ, ಬೇರೆಯವರಿಗೆ ಒಂದು ವಾದ ಎನ್ನುವಂತಹ ಸರಕಾರವೇ ಈಗ ಇರುವುದು ಅಥವಾ ಎಲ್ಲ ಬಡ ಜನರಿಗೂ ಅನುಕೂಲ ಮಾಡುವಂತಹ ಸರಕಾರವೇ ಎಂದು ನಾನು ಇಲ್ಲಿ ಕೇಳಬೇಕಾಗಿದೆ. ಇನ್ನು ನಮ್ಮ ಸರಕಾರದ ಒಂದು ವೈಶಿಷ್ಟತೆಯನ್ನು ಇಲ್ಲಿ ಹೇಳಬೇಕಾಗಿದೆ. ಈಗ ಸರಕಾರದಲ್ಲಿ ಹೆಲ್ತ್ ಮಿನಿಸ್ಟರಾಗಿರುವ ಶ್ರೀ ಪುಟ್ಟಸ್ವಾಮಿಯವರು ಡರ್ತ್ ಆಫ್ ಡಾಕ್ಟರ್ಸ್ ಇದ್ದಾರೆ ಇದರಿಂದಾಗಿ ನಮಗೆ ಡಾಕ್ಟರುಗಳೇ ಸಿಗುತ್ತಿಲ್ಲ ಎಂದು ಹೇಳಿದರು. ಇವೊತ್ತು ಸರಕಾರ ಹೇಳಲಿ ನಿಮಗೆ ಎಂತಹ ಡಾಕ್ಟರುಗಳು ಬೇಕು ಕೊಡುತ್ತೇವೆ. ನಿಮಗೆ ಎಂ.ಎಸ್. ಪಾಸು ಮಾಡಿರುವ ಡಾಕ್ಟರುಗಳು ಬೇಕೆ? ಎಂ.ಡಿ. ಪಾಸು ಮಾಡಿರುವ ಡಾಕ್ಟರುಗಳು ಬೇಕೆ? ಎಂ.ಹೆಚ್. ಪಾಸು ಮಾಡಿರುವವರು ಬೇಕೇ? ಎಫ್.ಆರ್.ಸಿ.ಎಸ್. ಪಾಸು ಮಾಡಿರುವವರು ಬೇಕೆ? ಅಥವಾ ಇನ್ನಾವುದಾದರೂ ಡಿಗ್ರಿಗಳನ್ನು ಪಾಸು ಮಾಡಿರುವಂತಹ ಡಾಕ್ಟರುಗಳು ಬೇಕೆ? ಬೇಕಾದಷ್ಟು ಜನ ಕೊಡಬಹುದು. ಆದರೆ ನಿಮಗೆ ಬೇಕಾದವರು ಬರುತ್ತಿಲ್ಲ ಎಂದು, ನೇಮಕ ಮಾಡಿಕೊಂಡ ಡಾಕ್ಟರುಗಳನ್ನು ದೂರದ ಹಳ್ಳಿಗಳಿಗೆ ತೆಗೆದುಕೊಂಡು ಹಾಕಬೇಕೆಂದು ಹೇಳುತ್ತಾರೆ. ಅದಕ್ಕಾಗಿ ಯಾರೂ ಬರುತ್ತಿಲ್ಲ. ನಿಮಗೆ ಅನುಕೂಲವಾದವರು ಹಾಗೂ ನಿಮ್ಮ ಪಕ್ಷಕ್ಕೆ ಸೇರಿದವರಿಂದ ಶಿಫಾರಸುಗಳು ಬಂದರೆ ಮಾತ್ರ ಅಂತಹವರಿಗೆ ಡಾಕ್ಟರುಗಳಾಗಿ ಮಾಡಿ ಅವರನ್ನು ಬೇಕಾದ ಸ್ಥಳಗಳಲ್ಲಿ ನೇಮಿಸುತ್ತೀರಿ. ಒಬ್ಬರಿಗೆ ಮಾತ್ರ ಅನುಕೂಲ ಮಾಡಿ ಇನ್ನೊಬ್ಬರಿಗೆ ಅನುಕೂಲ ಮಾಡುವುದಿಲ್ಲ. ಎಂದು ಹೇಳುವಂತಹ ಇಂತಹ ಮಂತ್ರಿಗಳು ಇದ್ದರೆ ಏನು, ಇಲ್ಲದಿದ್ದರೆ ಏನು?

ಪೋಲೀಸು ವೆಲ್‌ಫೇರು ಸ್ಟೇಟು ಎಂದು ಹೇಳುತ್ತಿದ್ದ ಕಾಲದಲ್ಲಿ ಈಗ ಅದು ಪೊಲೀಸು ಫೇರ್‌ವೆಲ್ ಸ್ಟೇಟ್ ಈ ದೇಶದಲ್ಲಿ ಆಗಿ ಹೋಗುತ್ತಿದೆ. ಇಲ್ಲಿ ನನಗೆ ಆಗಲೇ ಅಧ್ಯಕ್ಷರು ಹೆಸರುಗಳನ್ನು ಹೇಳುವುದು ಬೇಡ ಎಂದು ಹೇಳಿದ್ದಾರೆ. ಅದನ್ನು ಹೇಳುವುದಿಲ್ಲ. ಕುಂದಾಪುರ

ಕಿಕ್ಕೇರಿ ಇಲ್ಲಿರುವ ಪೋಲೀಸು ಜುಲಂ ಏನಾಯಿತು. ಕೃಷ್ಣರಾಜಪೇಟೆ ಮತ್ತು ಬೀದರ್‌ನಲ್ಲಿ ನಡೆದ ಜುಲಂ ಕೇಸುಗಳು ಏನಾದವು? ಮತ್ತು ಇಲ್ಲಿ ನಡೆದಂತಹ ಕಮ್ಯೂನಲ್ ಕ್ಲಾಷ್‌ಗಳು ಏನಾದವು? ಸುಖೀ ರಾಜ್ಯ ಮಾಡುತ್ತೇವೆ ಎಂದು ಹೇಳುತ್ತಿರುವ ಮೈಸೂರು ರಾಜ್ಯ ಇಂದು ಎಲ್ಲೆಲ್ಲೂ ಪೊಲೀಸ್ ರಾಜ್ಯವನ್ನು ಮಾಡಲು ಹೊರಟಿದ್ದಾರೆ. ಈ ರಾಜ್ಯದಲ್ಲಿ ಪ್ರತಿ ವರ್ಷವೂ ಎಷ್ಟು ಕಮ್ಯೂನಲ್ ಕ್ಲಾಷ್‌ಗಳು ಆಗುತ್ತಿವೆ. ಎನ್ನುವುದನ್ನೇನಾದರೂ ಪರಿಶೀಲನೆ ಮಾಡಿದ್ದೀರಾ? ಏತಕ್ಕಾಗಿ ಇದು ಆಗುತ್ತಿದೆ? ಇದಕ್ಕೆಲ್ಲಾ ಯಾರು ಕಾರಣರು ಯೋಚನೆ ಮಾಡಿದ್ದಾರೆಯೆ? ಈಚೆಗೆ ಈ ದೇಶದಲ್ಲಿ ಶಿವ ಸೇನೆ ಮಾಡುತ್ತಿದ್ದಾರೆ ಎಂದು ಹೇಳುತ್ತಿದ್ದರು. ಇದರ ಬಗ್ಗೆ ಇಲ್ಲಿ ನಾನು ಯಾರ ಹೆಸರೂ ಹೇಳುವುದಿಲ್ಲ ಒಂದೂರಿದೆ ಅದು ಕೊರಟಗೆರೆ ಎನ್ನುವ ಜಾಗದಲ್ಲಿ ಯಾರು ಯಾರು ಯಾವ ಜಾತಿಗೆ ಸೇರಿದವರು ಎಂದು ನೋಡುವುದಾದರೆ ಇಲ್ಲಿ ಶಿವ ಸೇನೆಯಂತೆ ಬಸವ ಸೇನೆಯನ್ನು ಮಾಡಬೇಕೆಂದು ಹೊರಟಿರುತ್ತಾರೆಯೇ ಎಂದು ನಾನು ಇಲ್ಲಿ ಕೇಳುತ್ತೇನೆ. ಇಲ್ಲಿರುವ ಅಧಿಕಾರಿಗಳೆಲ್ಲಾ ಒಂದೇ ಕೋಮಿನವರು, ಇಲ್ಲಿರುವ ತಹಶೀಲುದಾರರು, ಅಸಿಸ್ಟೆಂಟು ಕಮಿಷನರು ಬಿ.ಡಿ.ಒ. ಎಕ್ಸಿಕ್ಯುಟೀವ್ ಆಫೀಸರು, ಸಬ್ ಇನ್‌ಸ್ಪೆಕ್ಟರ್ ಆಫ್ ಪೋಲೀಸ್, ಸಬ್ ರಿಜಿಸ್ಟ್ರಾರು, ಇನ್‌ಸ್ಪೆಕ್ಟರ್ ಆಫ್ ಸ್ಕೂಲ್ಸ್, ಡಿಸ್ಟ್ರಿಕ್ಟ್ ಇನ್ಸ್‌ಪೆಕ್ಟರ್ ಆಫ್ ಸ್ಕೂಲ್ಸ್, ವೆಟರ್ನರಿ ಆಫೀಸರು, ವಿಲೇಜು ಲೆವಲ್ ಆಫೀಸರು ಹಾಗೂ ಇಲ್ಲಿರುವ ಮಾರ್ಕೆಟ್ ಕಮಿಟಿ ಆಫೀಸರು ಎಲ್ಲರೂ ಒಂದೇ ಜಾತಿಗೆ ಸೇರಿದವರು, ಕಾಂಗ್ರೆಸ್ ಸರಕಾರದವರು ಈಚೆಗೆ ಮಹಾರಾಷ್ಟ್ರದಲ್ಲಿ ಶಿವ ಸೇನೆ ತಯಾರಾಗಿ ಬೇಕಾದಷ್ಟು ಗಲಾಟೆಗಳು ಆಗುತ್ತಿವೆ ಎಂದು ಹೇಳುವವರು ಇಲ್ಲಿರುವ ನಿಜಲಿಂಗಪ್ಪನವರ ಸರಕಾರದಲ್ಲಿ ಈ ರೀತಿ ನೇಮಕಗಳನ್ನು ಮಾಡಿದ್ದಾರಲ್ಲಾ ಇದೇನು ಬಸವ ಸೇನೆ ಮಾಡಬೇಕೆಂದು ಹೊರಟಿದ್ದಾರೆಯೇ? ಮಹಾರಾಷ್ಟ್ರದ ಶಿವಸೇನೆಯನ್ನು ಬಲಿ ಹಾಕಬೇಕೆಂದು ಹೇಳುವವರು ಅಲ್ಲಿ ಪ್ರತ್ಯಕ್ಷವಾಗಿ ಮಾಡುತ್ತಾರೆ ಇಲ್ಲಿ ಪರೋಕ್ಷವಾಗಿ ಮಾಡಬೇಕೆಂದು ಮಾಡುತ್ತಿದ್ದಾರೆಯೇ? ಇದರ ಬಗ್ಗೆ ಮಾನ್ಯ ಮಂತ್ರಿಗಳು ತಮ್ಮ ಸರಕಾರಕ್ಕೆ ಅನುಕೂಲವಾಗುವವರೇ ಇಲ್ಲಿರಬೇಕು ಎಂದು ಮಾಡಿದ್ದಾರೆಯೇ ಹೊರತು ಬೇರೇನಿಲ್ಲ.

ನನಗೆ ಇನ್ನೂ ಎರಡು ಮೂರು ನಿಮಿಷಗಳ ಕಾಲ ಮಾತನಾಡಲು ಅವಕಾಶವನ್ನು ಕೊಡಬೇಕು. 1954ರಲ್ಲಿ ಸ್ಟೇಟ್ ವಕ್ಫ್ ಆಕ್ಟ್ ಒಂದನ್ನು ಮಾಡಿದ್ದಾರೆ. ಇದರ ಆಡಳಿತವನ್ನು ಈಗ ಶ್ರೀಮಾನ್ ನಿಜಲಿಂಗಪ್ಪನವರೂ ಮತ್ತು ಅದಕ್ಕೆ ಸಂಬಂಧಪಟ್ಟ ಮಂತ್ರಿಗಳೂ ಅಂದರೆ ರೆವಿನ್ಯೂ ಮಂತ್ರಿಗಳೂ ಹಾಗೂ ಡೆಪ್ಯುಟಿ ಮಿನಿಸ್ಟರ್ ಮಾನ್ಯ ಶ್ರೀ ಅಬ್ದುಲ್ ಗಫಾರ್ ಅವರು ನೋಡುತ್ತಿದ್ದಾರೆಂದು ನನಗೆ ಕಾಣುತ್ತದೆ. ಈಗ ವಕ್ಫ್ ಬೋರ್ಡಿನ ಆಸ್ತಿ 24 ಕೋಟಿ ರೂಪಾಯಿಗಳು ಸುಮಾರು 15 ಸಾವಿರ ಸಂಸ್ಥೆಗಳಿಂದ ಅರ್ಜಿಗಳು ಬಂದಿವೆ. ಅವುಗಳಿಂದ ಈ ಬೋರ್ಡಿಗೆ 4 ಕೋಟಿ ರೂಪಾಯಿಗಳಷ್ಟು ನಿವ್ವಳಾದಾಯವಿದೆ. ಅದು ಸ್ಟಾಚುಟರಿ ಬಾಡಿ. ಆ ರೀತಿಯಾಗಿ ಅದು ಇರುವುದರಿಂದ ಯಾವ ಸಂಸ್ಥೆಯಲ್ಲೂ ಇವತ್ತಿನವರೆಗೂ

ಅಲ್ಲಿನ ಲೆಕ್ಕಗಳು ಆಡಿಟ್ ಆಗಿಲ್ಲ, ಬಡ್ಜೆಟ್ ಫ್ರೇಂ ಆಗಿಲ್ಲ. ಅಲ್ಲಿ ಕೆಲಸ ಮಾಡುವವರಿಗೆ ಸರಿಯಾದ ಸಂಬಳ ಸಾರಿಗೆ ಇಲ್ಲ. ಆ ಸಂಸ್ಥೆಗಳಿಂದ ಬರತಕ್ಕ ದುಡ್ಡನ್ನು ಬರೀ ದುರುಪಯೋಗಮಾಡುತ್ತಿದ್ದಾರೆ. ಅಲ್ಲಿನ ಮೆಂಬರುಗಳಿಗೆ ಟಿ.ಎ ಮತ್ತು ಡಿ.ಎ. ಕೊಡುತ್ತಾರೆ. ಅದರ ಜೊತೆಗೆ ಮುಜರಾಯ್ ಸಂಸ್ಥೆಗೆ ಇದನ್ನು ವಹಿಸಿದ್ದರಿಂದ ಈಗ ಅಲ್ಲಿಯವರೇ ಮೇಯುವುದಕ್ಕೆ ಷುರುಮಾಡಿದ್ದಾರೆ. ಅಲ್ಲಿ ಉಸ್ತುವಾರಿ ಮಾಡಿ ಅಂದರೆ ಸೌತೇಶ ದರ್ಗದ ಲಕ್ಷಾಂತರ ರೂಪಾಯಿಗಳಷ್ಟು ಆಸ್ತಿಯನ್ನೆಲ್ಲಾ ಒಬ್ಬಿಬ್ಬರ ಕೈಲಿ ಕೊಟ್ಟಿದ್ದಾರೆ. ಅದರ ಬಗ್ಗೆ ಏನಾಯಿತು ಎಂಬ ಬಗ್ಗೆ ಇವತ್ತಿನವರೆಗೂ ಅಪೀಲು ಮಾಡಲಿಲ್ಲ. ಅದನ್ನು ನೋಡ... ಇಲ್ಲ. ಇದೇನು ಅನ್ಯಾಯ? ಇಷ್ಟಾದರೂ ಮುಜರಾಯ್ ಸಂಸ್ಥೆಯ ತಹಸೀಲ್ದಾರ್, ರೆವಿನ್ಯೂ ಇನ್‌ಸ್ಪೆಕ್ಟರ್, ಮುಂತಾದ ಸರ್ಕಾರದ ಅಧಿಕಾರಿಗಳು ಅದಕ್ಕೆ ಸಂಬಂಧಪಟ್ಟ ಡಾಕ್ಯುಮೆಂಟ್ಸ್‌ನ್ನು ಕೊಟ್ಟಿಲ್ಲ. ಅವನ್ನು ಉಪಮಂತ್ರಿಗಳಾದ ಮಾನ್ಯ ಶ್ರೀ ಅಬ್ದುಲ್ ಗಫಾರ್ ಅವರಿಗೂ ಹಾಗೂ ರೆವಿನ್ಯೂ ಸಚಿವರಿಗೂ ಬರೆದು ಕೊಟ್ಟಿದ್ದೇನೆ. ಆದರೆ ಇದುವರೆಗೂ ಅದರ ಬಗ್ಗೆ ನನಗೆ ಉತ್ತರ ಬಂದಿಲ್ಲ. ಮಾನ್ಯ ಮುಖ್ಯಮಂತ್ರಿಗಳಿಗೂ ಒಂದು ಕಾಗದವನ್ನು ಈ ಸಂದರ್ಭದಲ್ಲಿ ಬರೆದಿದ್ದೇನೆ. ಇದು ಹಿಂದೆ ಹೈದರಾಲಿ-ಟಿಪ್ಪುಸುಲ್ತಾನ್ ಕಾಲದಲ್ಲಿ ಆದುದು. ಈಗ ಆ ಮುಜರಾಯ್ ಸಂಸ್ಥೆಯಲ್ಲಿಯೇ ಎಲ್ಲರೂ ಆ ಆಸ್ತಿಯನ್ನು ಮೇಯುವುದಕ್ಕೆ ಹೋಗಿ ಉಳಿದಿದ್ದನ್ನು ಹಂಚಿಕೊಂಡಂತೆ ನನಗೆ ಕಾಣುತ್ತದೆ. ಅದೇನೂ ಅವರ ತಾತನ ಸ್ವತ್ತೇ ಎಂಬುದಾಗಿ ನಾನು ಪ್ರಶ್ನೆಮಾಡುತ್ತೇನೆ. ನಿಜವಾಗಿ ಮುಜರಾಯಿ ಸಂಸ್ಥೆ ಈ ರೀತಿಯಾಗಿ ಕೆಲಸ ಮಾಡುವುದು ಸರಿಯಲ್ಲ.

ಇನ್ನು ಮೆಡಿಕಲ್ ಡಿಪಾರ್ಟ್‌ಮೆಂಟ್ ವಿಷಯವನ್ನು ಹೇಳಬೇಕಾಗಿದೆ. ಮಾನ್ಯ ಶ್ರೀ ಪುಟ್ಟಸ್ವಾಮಿಯವರು ಬಂದಿದ್ದಾರೆ. ಇವರು ಬರೀ ಮೈಸೂರು ಜಿಲ್ಲೆಯ ಮಂತ್ರಿಗಳಾಗಿದ್ದಾರೋ ಅಥವಾ ಕರ್ನಾಟಕದ ಮಂತ್ರಿಗಳಾಗಿ ಕೆಲಸ ಮಾಡುತ್ತಿದ್ದಾರೋ ಗೊತ್ತಿಲ್ಲ. ತಮ್ಮ ಮೂಲಕ ಮಂತ್ರಿಗಳಿಗೆ ನಾನು ಹೇಳಬೇಕಾದುದಿಷ್ಟೇ. ಕಬೀರ್‌ದಾಸರು ಒಂದು ಮಾತನ್ನು ಹೇಳಿದ್ದಾರೆ. ಅದೇನೆಂದರೆ ಜನ ನಿಮ್ಮನ್ನು ಬೈಯುತ್ತಾ ಇದ್ದರೆ, ನೀವು ಅವರಿಂದ ಬೈಯಿಸಿಕೊಂಡರೂ ನೀವು ಮಾತ್ರ ನಿಮ್ಮ ಕೆಲಸದಲ್ಲಿ ಸನ್ಮಾರ್ಗದಲ್ಲಿ ನಡೆಯಿರಿ ಎಂದು. ಹಾಗೆಯೇ ಹಿಂದಿಯಲ್ಲಿ ಒಂದು ಮಾತನ್ನು ಈ ರೀತಿಯಾಗಿ ಹೇಳಿದ್ದಾರೆ. "ಮೂಮೆ ಬೋಲೆ ರಾಂ, ಅಂದರ್ ಕರೇಕಾಂ, ಐಸೇ ಬೇಯಿಮಾನ್‌ಕೊ, ಕಹಾಂಸೆ ಮಿಲೇರಾಂ," ಎಂದು. ಅಂದರೆ ಹೇಳುವುದು ಒಂದು ನಡೆಯುವುದು ಬೇರೆ ರೀತಿ, ಆದರೆ ದೇಶಕ್ಕೆ ಹೇಳುವುದು ಬೇರೆ ರೀತಿ, ನಾವು ಮಾಡುವುದು ಹಾಗೆಯೇ, ಅಂದರೆ ಹೇಳುವುದು ಒಂದು, ಮಾಡುವುದು ಒಂದು.

ಇನ್ನು ಲಂಚ ರುಷುವತ್ತು ವಿಷಯ ಹೇಳಬೇಕೆಂದರೆ ಅದು ಕಾವೇರಿ ನದಿಯ ಹಾಗೆ ಹೋಗುತ್ತಿದೆ. ಆದ್ದರಿಂದ ಈಗ ತಂದಿರತಕ್ಕ ಅವಿಶ್ವಾಸ ನಿರ್ಣಯ ಸರಿಯಾಗಿದೆ. ನೀವೆಲ್ಲರೂ ಕಾಂಗ್ರೆಸ್ ಭಕ್ತರಾಗಿರಬಹುದು. ಆದರೆ ಆ ಸಂಸ್ಥೆಯ ತತ್ವ ನಿಮ್ಮಲ್ಲಿಲ್ಲ. ತಾವು ತದ್ರೂಪು

ಮಹಾತ್ಮ ಗಾಂಧಿಯವರ ಶಾಂತಿ ಹಾಗೂ ಹರಿಶ್ಚಂದ್ರರಂತಹ ನಿಷ್ಠೆ ಪಡೆದಿದ್ದೇವೆಂದು ಹೇಳಿಕೊಳ್ಳಬಹುದು. ಆದರೆ ಅಂತಹ ಗುಣಗಳು ನಿಮ್ಮಲ್ಲಿಲ್ಲವೆಂಬುದು ಇದರಿಂದ ಚೆನ್ನಾಗಿ ಗೊತ್ತಾಗುತ್ತದೆ. ನೆಹರೂ ಅವರ ಫೋಟೊ ನೋಡುವುದನ್ನು ಬಿಟ್ಟು ಈಗ ಮಾನ್ಯ. ಶ್ರೀ ನಿಜಲಿಂಗಪ್ಪನವರನ್ನು ಇಲ್ಲಿ ನೋಡಬೇಕಾಗಿದೆ. ಆದ್ದರಿಂದ ಈಗ ನಮ್ಮಂತಹವರಿಗೆ ಓಟು ಕೊಡಬೇಕೆಂದು ದೇಶ ಹೇಳುತ್ತಿದೆಯೇ ಹೊರ್ತು ನಿಮ್ಮಂತಹವರಿಗೆ ಅಲ್ಲವೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## 1968-1969ನೇ ಸಾಲಿನ ಮುಂಗಡ ಪತ್ರದ ಮೇಲಿನ ಸಾಮಾನ್ಯ ಚರ್ಚೆ

ಶ್ರೀ ಅಜೀಜ್‌ಸೇಟ್ :- ಸ್ವಾಮಿ ಈಗ ನಮ್ಮ ಮುಂದಿರುವ ಸರ್ಪ್ಲಸ್ ಬಜೆಟ್ ವಿಷಯದಲ್ಲಿ ಮಾತನಾಡಲು ನಿಂತಿದ್ದೇನೆ. ಅನೇಕರು ಆಗಲೇ Interrupt ಮಾಡಬೇಕು, ಗಲಾಟೆ ಮಾಡಬೇಕು ಎಂದು ಕಾದುಕೊಂಡಿದ್ದಾರೆ. ಆದರೆ ಎಲ್ಲಾ ಕಡೆ ಗಲಾಟೆ ಮಾಡಿದರೂ, ನನಗೆ ತಡೆದುಕೊಳ್ಳುವುದಕ್ಕೆ ಶಕ್ತಿಯಿದೆ. ಸುಮ್ಮನೇ ಯಾರೂ ಗಲಾಟೆ ಮಾಡದೇ ಮರ್ಯಾದೆಯಿಂದ ನನ್ನ ಭಾಷಣ ಕೇಳಬೇಕೆಂದು ಕೇಳಿಕೊಳ್ಳುತ್ತೇನೆ. ಇಷ್ಟು ಹೇಳಿ ಕೆಲವು ಟೀಕೆಗಳನ್ನು ಮಾತ್ರ ನಿಮ್ಮ ಮುಂದೆ ಇಡುತ್ತಿದ್ದೇನೆ.

ಸ್ವಾಮಿ ರಾಜ್ಯಪಾಲರ ಭಾಷಣದ ಚರ್ಚೆಯ ಸಂದರ್ಭದಲ್ಲಿ ವಿರೋಧಪಕ್ಷದವರು ಒಳ್ಳೆಯದನ್ನು ಬಿಟ್ಟು ಕೆಟ್ಟದನ್ನು ಮಾತ್ರ ಹೇಳಿ ಟೀಕಿಸುತ್ತಾರೆ. ಒಳ್ಳೆಯ ಕೆಲಸ ಏನು ಸರ್ಕಾರ ಮಾಡಿದೆ ಅದನ್ನು ಹೇಳುವುದಿಲ್ಲವೆಂದು ಮುಖ್ಯಮಂತ್ರಿಗಳು ಹೇಳಿದರು. ನಿಜ, ವಿರೋಧ ಪಕ್ಷದವರು ಈ ರೀತಿ ಮಾಡಬಾರದು. ಒಳ್ಳೆಯದನ್ನು ಮಾಡಿದ್ದರೆ ಅದನ್ನು ಹೇಳಬೇಕು. ಕೆಟ್ಟದನ್ನು ಮಾಡಿದ್ದರೆ ಅದನ್ನು ಹೇಳಬೇಕು. ಸರ್ಕಾರ ಅದನ್ನು ಒಪ್ಪಿಕೊಳ್ಳಬೇಕು.

Mr. Chairman (Dr. R. Naganagouda) in the Chair.

ಕೆಟ್ಟದ್ದು ಮಾಡುತ್ತಾ ಇರುವುದನ್ನು ಮೊದಲಿನಿಂದ ಹೇಳಿಕೊಂಡು ಬಂದಿದ್ದೇವೆ. ದುರಾಡಳಿತ, ಲಂಚ ರುಷುವತ್ತು ಜಾಸ್ತಿಯಾಗಿರುವುದು ಜನರ ಹಿತಕ್ಕೆ ಯಾವ ಕೆಲಸವನ್ನು ಮಾಡುತ್ತಿಲ್ಲ ಮತ್ತು ಅಧಿಕಾರಿಗಳಲ್ಲಿ ಅಹಂಭಾವ ಇದೇ ಎಂದು ತಿಳಿಸಿದ್ದೇವೆ. ಒಳ್ಳೆಯ ಕೆಲಸ ಏನು ಮಾಡಿದ್ದಾರೆ ಎಂದರೆ, ಅವರಿಗೆ ಹೇಳುತ್ತೇನೆ ಈ ಸರ್ಕಾರ ನಿಮ್ಮ ಕೈಗೆ ಬಂದ ಮೇಲೆ ನಿಮ್ಮ ಮನೆತನದವರನ್ನು ಸುಖವಾಗಿ ನೋಡಿಕೊಂಡಿದ್ದೀರಿ. ಆಸ್ತಿ ಪಾಸ್ತಿಗಳನ್ನು ಜಾಸ್ತಿ ಮಾಡಿಕೊಂಡಿದ್ದೀರಿ. ನಿಮ್ಮ ಪಕ್ಷದವರಿಗೆ ಸ್ಥಾನಮಾನ ನೀಡಿದ್ದೀರಿ. ಅದು ನ್ಯಾಯ. ನಿಮಗೆ ಮೊದಲು ಏನೂ ಆಸ್ತಿ ಇರಲಿಲ್ಲ. ಈಗ ಹತ್ತರಷ್ಟು ಆಸ್ತಿ ಇದೆ. ನಿಮ್ಮ ಮನೆತನಕ್ಕೆ ವಿದ್ಯಾಭ್ಯಾಸಕ್ಕೆ, ಸರ್ಕಾರಿ ಚಾಕರಿಯಲ್ಲಿ ಇದೇ ರೀತಿ ಎಲ್ಲದರಲ್ಲೂ ನೀವು ಸರಿಯಾಗಿ ಹಂಚಿಕೊಂಡಿದ್ದೀರಿ. ಅದನ್ನು ನೀವು ಒಪ್ಪಿಕೊಳ್ಳಲೇಬೇಕು, ನಿಮ್ಮ ಮಂತ್ರಿ ಮಂಡಲದಲ್ಲಿ ಒಬ್ಬ ಸದಸ್ಯರು ಇದ್ದಾರೆ. ಅವರಿಗೆ 4 ಎಕರೆ ಜಮೀನು ಅವರ ಪಿತ್ರಾರ್ಜಿತವಾಗಿ ಬಂದಿದ್ದು, ಈಗ 3 ಲಕ್ಷ 4 ಲಕ್ಷದಷ್ಟು ಆಸ್ತಿ ಇದೆ. ಮಾನ್ಯ ಮುಖ್ಯಮಂತ್ರಿಗಳು ನೋಡುತ್ತಾ ಇದ್ದಾರೆ ಬೇಕಾದರೆ ನಾನು ಅವರ ಆಫೀಸಿಗೆ ಬಂದು ಈ ವಿಷಯ ತಿಳಿಸುತ್ತೇನೆ.

ಶ್ರೀ ಎಸ್. ನಿಜಲಿಂಗಪ್ಪ: ಮಾನ್ಯ ಸದಸ್ಯರಿಗೆ ಈ ವಿಷಯ ಹೇಳಬೇಕೆಂದು ಇಚ್ಛೆ ಪಡುತ್ತೇನೆ. ನೀವು ದಯಪಿಟ್ಟು ಇವತ್ತೋ ನಾಳೆಯೋ ನನ್ನ ಹತ್ತಿರ ಬಂದು ಹೇಳಿ. ನೀವು ಹೇಳಿದ್ದನಲ್ಲಾ ನಾನೇ ಬರೆದುಕೊಳ್ಳುತ್ತೇನೆ ಹಾಗೂ ವಿಚಾರಿಸುತ್ತೇನೆ ಅಷ್ಟು ಉಪಕಾರ ಮಾಡಿ.

---

ವಿಸನದಿ: 8.3.1968

ಶ್ರೀ ಅಜೀಜ್‌ಸೇಟ್:- ವಿಚಾರ ಮಾಡುತ್ತೇನೆ ಎಂದರೆ, ಸಾಲದು, ಕ್ರಮ ಕೈಗೊಳ್ಳುತ್ತೇನೆ ಎಂದು ಭರವಸೆ ನೀಡಬೇಕು.

ಶ್ರೀ ಎಸ್. ನಿಜಲಿಂಗಪ್ಪ: ಕ್ರಮ ತೆಗೆದುಕೊಳ್ಳಲು ಲಾಯಕ್ಕಾದರೆ ಕ್ರಮ ತೆಗೆದುಕೊಳ್ಳುತ್ತೇನೆ. ಮಾನ್ಯ ಸದಸ್ಯರು ಜವಾಬ್ದಾರಿಯುತರಾದವರು. ಅದ್ದರಿಂದ ಅವರು ಹೇಳುವುದು ಎಲ್ಲಾ ಒಳ್ಳೆಯದೇ ಎಂದು ಹೇಳಿದನ್ನು ನೋಟ್ ಮಾಡುಕೊಂಡು ಅವರ ರುಜು ಮಾಡಿಸಿಕೊಳ್ಳುತ್ತೇನೆ. Tomorrow if he can meet me and give me those allegations: I will take them down and I promise very solomnly in this House that I shall make a very serious enquiry and do everything possible to find out the truth or otherwise and submit my report to this House.

**Aziz Sait:-** That will be a red letter day in the history of Mysore and I will congratulate the Chief Minister if he does that.

ಶ್ರೀ ಅಜೀಜ್‌ಸೇಟ್:- ಈ ದಿವಸ ನಮ್ಮ ಮುಖ್ಯ ಮಂತ್ರಿಗಳಿಗೆ ಬೇರೆ ಕೆಲಸ ಜಾಸ್ತಿಯಾಗಿದೆ. ಇಲ್ಲಿ ರಾಜ್ಯದ ಆಡಳಿತವನ್ನು ಮುಖ್ಯಮಂತ್ರಿಗಳಾಗಿ ನೋಡಿಕೊಳ್ಳಬೇಕು. ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗಿ ಡೆಲ್ಲಿ, ಲಖ್ನೋ ಈ ಎಲ್ಲಾ ಸ್ಥಳಗಳನ್ನು ಸುತ್ತಬೇಕು. ವಿರಾಮವಿಲ್ಲದೇ ಆಡಳಿತ ವಿಷಯದಲ್ಲಿ ಸರಿಯಾಗಿ ನಿಗಾ ಇಟ್ಟು ಕೆಲಸ ಮಾಡುವುದಕ್ಕೆ ಸಾಧ್ಯವಾಗುತ್ತಿಲ್ಲ. ಇವರ ಗೈರು ಹಾಜರಿಯಲ್ಲಿ ಇತರೆ ಮಂತ್ರಿಗಳು ಮನಸ್ಸಿಗೆ ಬಂದಂತೆ ಕೆಲಸ ಮಾಡುತ್ತಿದ್ದಾರೆ. ನಮ್ಮ ರಾಜ್ಯವನ್ನು ವೆಲ್‌ಫೇರ್‌ಸ್ಟೇಟ್ ಎಂದು ಕರೆಯುವುದಕ್ಕೆ ಬದಲಾಗಿ ಫೇರ್‌ವೆಲ್‌ಸ್ಟೇಟ್ ಎಂದು ಕರೆಯುವುದು ಲೇಸೆಂದು ಕಾಣುತ್ತದೆ. ಇಲ್ಲಿ ಜನರಿಗೆ ಸರಿಯಾಗಿ ವಿದ್ಯಾ ಸೌಲಭ್ಯವಿಲ್ಲ. ಸರಿಯಾಗಿ ಆಹಾರ ಧಾನ್ಯಗಳು ಸಿಗುತ್ತಿಲ್ಲ. ಜನರಿಗೆ ಉದ್ಯೋಗಗಳು ದೊರೆಯುತ್ತಿಲ್ಲ. ಲಾ ಅಂಡ್ ಆರ್ಡರ್ ಸರಿಯಾಗಿಲ್ಲ. ಇನ್ನು ಬಹಳ ನಾಚಿಕೆಗೇಡಿನ ವಿಚಾರವಿದೆ. ಅದೇನು ಎಂದರೆ, ನನಗೆ ಕನ್ನಡದಲ್ಲಿ ಸರಿಯಾಗಿ ಮಾತನಾಡಲು ಬರುವುದಿಲ್ಲ. ಆದಾಗ್ಯೂ ನಾನು ಕನ್ನಡದಲ್ಲೇ ಮಾತನಾಡುತ್ತಿದ್ದೇನೆ. ಆಗಲಾದರೂ ನನ್ನ ಆ ಮಿತ್ರರಿಗೆ ನಾಚಿಕೆಯಾಗಲಿ ಎಂದು. ನಮ್ಮ ರಾಜ್ಯದಲ್ಲಿ ಕನ್ನಡವನ್ನು ರಾಜ್ಯಭಾಷೆ ಮಾಡಿದ 1961-62ನೇ ಸಾಲಿನಲ್ಲಿ ಅಲ್ಲಿಂದ ಇಲ್ಲಿಯತನಕ ಕನ್ನಡ Official Languages ಆದರೂ ಉರ್ದು ಪಾಠಶಾಲೆಯಲ್ಲಿ ಜಾರಿಯು ಮಾಡಿರುವುದಿಲ್ಲ. ಹೀಗಾದರೆ ಸರ್ಕಾರದಲ್ಲಿ ಇಂಥ ವಿಚಾರಗಳಲ್ಲಿ ಏನಾದರೂ ಒಂದು ರೀತಿ, ನೀತಿ ಕಾನೂನು ಇದೆಯೇ ಎನ್ನುವುದು ನನಗೆ ಕಂಡು ಬರುತ್ತಿಲ್ಲ. ಉರ್ದುಕಲಿತ ನಮ್ಮ ಹುಡುಗರು ಪೊಲೀಸ್ ಟ್ರೈನಿಂಗ್ ಹೋದರೆ ಕನ್ನಡ ಬರುವುದಿಲ್ಲವೆಂದು ಸೇರಿಸಿಕೊಳ್ಳುವುದಿಲ್ಲ. ನಮ್ಮ ರಾಜ್ಯದಲ್ಲಿ ಸುಮಾರು 22 ಲಕ್ಷ ಜನರು ಉರ್ದು ಭಾಷೆ ಕಲಿತಿದ್ದಾರೆ. ಆದರೆ ಅವರಿಗೆ

ಕನ್ನಡವನ್ನು ಕಲಿಯುವುದಕ್ಕೆ ಒಂದು ಒತ್ತಡವನ್ನು ಹಾಕದ ಸರ್ಕಾರ ಇನ್ನು ಯಾವ ಕೆಲಸ ಮಾಡುವುದಕ್ಕೆ ಲಾಯಕ್ಕಾಗಿದೆಯೋ ತಿಳಿದಿಲ್ಲ. ಇನ್ನು ಮುಂದೆ ನಮ್ಮ ಉರ್ದು ಶಾಲೆಗಳಲ್ಲಿ ಅಭ್ಯಾಸ ಮಾಡುವವರು ಕನ್ನಡವನ್ನು ಕಲಿಯಬೇಕೆಂದು ಒತ್ತಾಯ ಮಾಡಬೇಕಾದ್ದು ಸರ್ಕಾರದ ಕರ್ತವ್ಯ.

ಸರ್ಕಾರಕ್ಕೆ ಆದಾಯ ತರಲು ಪಾನ ನಿಷೇಧವನ್ನು ತೆಗೆದುಹಾಕಿದರು. ಇದರಿಂದ ಸರ್ಕಾರಕ್ಕೆ ಬೇಕಾದಷ್ಟು ರೆವಿನ್ಯೂ ಆದಾಯ ಜಾಸ್ತಿ ಆಯಿತು. ನಮ್ಮ ಮೈಸೂರು ಸಿಟಿಯಲ್ಲಿ ಶಾಲೆಗಳ ಪಕ್ಕದಲ್ಲಿ ಟಾಡಿಶಾಪ್ ಇದೆ. ಯಾರು ಬೇಕಾದರೂ ಹೋಗಿ ನೋಡಬಹುದು. ಇವರು ಒಂದು ಆರ್ಡರನ್ನು ಜಾರಿ ಮಾಡುವಾಗ ಅದಕ್ಕೆ ಬೇಕಾಂದಂಥ, ನೇಮ, ನೀತಿ, ಯೋಜನೆ ಮತ್ತು ನಿಯಮ ಯಾವುದೂ ಇವರಿಗೆ ಬೇಡವೇ? ಎಕ್ಸೈಜ್ ಮಂತ್ರಿಗಳಿಗೆ ನಾನು ಹೇಳುವುದು ಏನೆಂದರೆ, ಇವು ಎಲ್ಲಿರಬೇಕೆಂದು ಆಕ್ಟ್‌ನಲ್ಲಿ ಹೇಳಿದೆಯೋ ಅಲ್ಲಿರಲಿ. ಆದರೆ ಈಗ ಶಾಲೆಗಳ ಹತ್ತಿರ ಆಸ್ಪತ್ರೆ, ಮೆಯಿನ್‌ರೋಡ್ ಹತ್ತಿರ ಇರುವ ಟಾಡಿ ಮತ್ತು ಅರಾಕ್ ಶಾಪ್‌ಗಳನ್ನು ಕೂಡಲೇ ತೆಗೆಯಬೇಕೆಂದು ಹೇಳಿ ನನ್ನ ಮಾತು ಮುಗಿಸುತ್ತೇನೆ.

## ಬೆಂಗಳೂರು ನಗರ ಸಾರಿಗೆಗೆ ಸಂಬಂಧಿಸಿದಂತೆ ನಡೆದ ಅಲ್ಪಕಾಲಾವಧಿ ಚರ್ಚೆಗೆ ನೀಡಿದ ಉತ್ತರ:

ಅಜೀಜ್‌ಸೇಟ್: (ಕಾರ್ಮಿಕ ಸಚಿವರು) ಸ್ವಾಮಿ ಈಗ ನಾನು ಮೊದಲು ಶ್ರೀ ವಾಟಾಳ್ ನಾಗರಾಜ್ ಮಾಡಿದ ಆಪಾದನೆಯತ್ತ ಉತ್ತರಿಸುತ್ತೇನೆ. ಅವರು ಎಂ.ಎಸ್.ಆರ್.ಟಿ.ಸಿ. ಮತ್ತು ಸಚಿವರ ನಡುವೆ ಸೌಹಾರ್ದ ವಾತಾವರಣವಿಲ್ಲವೆಂದು ಹೇಳಿದ್ದಾರೆ. ಇದು ತಪ್ಪು. ನಮ್ಮ ನಡುವೆ ಉತ್ತಮ ಬಾಂಧವ್ಯವಿದೆ. ಇಂದು ಬೆಳಿಗ್ಗೆ ಕೂಡ ನಾನು ಎಂ.ಎಸ್.ಆರ್.ಟಿ.ಸಿ. ಕಛೇರಿಗೆ ಹೋಗಿ ಕೆಲವು ಮುಖ್ಯ ವಿಚಾರಗಳನ್ನು ಚರ್ಚಿಸಿದ್ದೇನೆ. ನಿಜವಾದ ಸಮಸ್ಯೆ ಇರುವುದು ಬಿ.ಟಿ.ಎಸ್. ಬಗ್ಗೆ. 1961 ರಿಂದ 1971ರೊಳಗೆ ಬೆಂಗಳೂರಿನ ಜನಸಂಖ್ಯೆ ಸಾಕಷ್ಟು ಹೆಚ್ಚಾಗಿದೆ. ಬಿ.ಟಿ.ಎಸ್.ಗೆ ಈ ಹೆಚ್ಚುತ್ತಿರುವ ಜನಸಂಖ್ಯೆ ಮತ್ತು ಬಡಾವಣೆಗಳ ಬೇಡಿಕೆಯನ್ನು ಪೂರೈಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಇಡೀ ಸಾರಿಗೆ ವ್ಯವಸ್ಥೆಗೆ ಒಂದು ಸಂಶೋಧನಾ ವರದಿಯನ್ನು ತಯಾರಿಸುವಂತೆ ಎಂ.ಎಸ್.ಆರ್.ಟಿ.ಸಿ.ಗೆ ತಿಳಿಸಿದ್ದೇನೆ. ನನ್ನ ಮುಂದೆ ಸ್ವಲ್ಪ ಮಾಹಿತಿ ಇದೆ. ಬೆಂಗಳೂರು ನಗರ ಸಾರಿಗೆಯ ಹೊರವಲಯದಲ್ಲಿ ಮಹಾನಗರ ಪಾಲಿಕೆಯ ಮಿತಿಯಿಂದ 20 ಕಿ.ಮೀ. ದೂರದವರೆಗೆ ಸಂಚರಿಸುತ್ತಿದೆ ಮತ್ತು 400 ಚದರ ಕಿ.ಮೀ.ಗಳ ಒಟ್ಟು ವಿಸ್ತೀರ್ಣ ಮುಟ್ಟುತ್ತಿದೆ. ಈಗ ಬೆ.ನ.ಸಾ. 5 ಡಿಪೋಗಳಿವೆ. 3 ಡಿಪೋ ಶಾಂತಿನಗರದಲ್ಲಿದೆ., 1 ಜಯನಗರ, 1 ಹೊಸಹಳ್ಳಿಯಲ್ಲಿದೆ ಮತ್ತು ಕೃ. ರಾ. ಮಾರ್ಕೆಟ್, ಕೆಂಪೇಗೌಡ ವೃತ್ತ ಮತ್ತು ಶಿವಾಜಿನಗರದಿಂದ ಹೆಚ್ಚು ಬಿ.ಟಿ.ಎಸ್.ಗಳು ಸಂಚರಿಸುತ್ತಿವೆ.

ಬೆಂಗಳೂರಿನ ಜನಸಂಖ್ಯೆ 17.50 ಲಕ್ಷವಿದ್ದು ಪ್ರತಿದಿನ 352 ಬಸ್‌ಗಳು 3.17 ಲಕ್ಷ ಪ್ರಯಾಣಿಕರನ್ನು 67,124 ಕಿ.ಮೀ.ವನ್ನು ಕ್ರಮಿಸುತ್ತಿವೆ.

ಈಗ ಬೆಂ.ನ.ಸಾರಿಗೆಯಲ್ಲಿ 2/3 ಭಾಗ ಲೈಲಾಂಡ್ ಬಸ್‌ಗಳು 1/3 ಭಾಗ ಟಾಟಾ ಬಸ್‌ಗಳು ಇವೆ. ಈ ವರ್ಷ ಇನ್ನೂ 10 ಟಾಟಾ, 40 ಲೈಲಾಂಡ್ ಬಸ್‌ಗಳು ಖರೀದಿ ಮಾಡಲಾಗುವುದು.

ಮೈಸೂರು ರಾಜ್ಯ ವಿದ್ಯುಚ್ಛಕ್ತಿ ಮಂಡಳಿಯು ರಸ್ತೆಗಳ ಮೇಲೆ ಹಾಯ್ದಿರುವ ವಿದ್ಯುಚ್ಛಕ್ತಿ ಕೇಬಲ್‌ಗಳನ್ನು ಹಂತಹಂತವಾಗಿ ತೆಗೆಯುತ್ತಿದೆ. ಇದರಿಂದ ಇನ್ನೂ ಹೆಚ್ಚು ಡಬಲ್ ಡೆಕರ್ ಬಸ್‌ಗಳನ್ನು ಓಡಿಸಬಹುದು. ರೈಲ್ವೆ ಮೇಲ್ಸೇತುವೆ ಇರುವುದರಿಂದ ರಾಜಾಜಿನಗರ, ವಿಜಯನಗರದಂತಹ ಬಡಾವಣೆಗಳಿಗೆ ಡಬಲ್ ಡೆಕರ್ ಬಸ್ ಸಾಧ್ಯವಾಗಿಲ್ಲ.

ಈಗ ಒಟ್ಟು 146 ಬಸ್ ತಂಗುದಾಣಗಳಿವೆ. 1971-72ರಲ್ಲಿ ಇನ್ನೂ 5 ತಂಗುದಾಣ ನಿರ್ಮಿಸಲಾಗಿದೆ. ಬೆಂ.ನ.ಸಾರಿಗೆಯಲ್ಲಿ ಅಪಘಾತ ಜನರ ಗಮನ ಸೆಳೆದಿರುವುದು ನಿಜ. ಆದರೆ ಬೇರೆ ಮಹಾನಗರಗಳಿಗೆ ಹೋಲಿಸಿದರೆ ಅದು ತುಂಬಾ ಕಡಿಮೆ ಎಂದು

ಹೇಳಬಹುದು. ಬೆಂ.ನ.ಸಾ. 1.03 ಲಕ್ಷ ಕಿ.ಮೀ. 1 ಅಪಘಾತವಾದರೆ ಹೈದರಾಬಾದ್, ಅಹಮದಾಬಾದ್, ಬಾಂಬೆ, ಡೆಲ್ಲಿ ಮತ್ತು ಕಲ್ಕತ್ತಾಗಳಲ್ಲಿ ಅದು 2 ರಿಂದ 11.24 ರಷ್ಟಿದೆ. ಅಪಘಾತಗಳ ತಡೆಗೆ ಎಂ.ಎಸ್.ಆರ್.ಟಿ.ಸಿ. ಹೆಚ್ಚು ಯೋಜನೆಗಳನ್ನು ತಯಾರಿಸಿದೆ.

ಬೆಂ.ನ.ಸಾರಿಗೆಯ ಬೆಳವಣಿಗೆ 1957-58ಕ್ಕೆ ಹೋಲಿಸಿದರೆ 1971-72ರಲ್ಲಿ ಬೆಂ.ನ.ಸಾ.ಗೆ ಬೆಳವಣಿಗೆ ಮೂರು ಪಟ್ಟು ಹೆಚ್ಚಿದೆ.

| | | 1957-58 | 1971-72 |
|---|---|---|---|
| 1. | ಷೆಡ್ಯೂಲ್‌ಗಳ ಸಂಖ್ಯೆ | 105 | 344 |
| 2. | ಕ್ರಮಿಸುವ ದೂರ | 20,782 ಕಿ.ಮೀ | 67,124 ಕಿ.ಮೀ. |
| 3. | ಪ್ರತಿದಿನ ರಸ್ತೆಯಲ್ಲಿ ಓಡಾಡುವ ಬೆಂ.ನ.ವಾಹನ | 116 | 352 |
| 4. | ಸರಾಸರಿ ಪ್ರಯಾಣಿಕರ ಓಡಾಟ | 1.10 ಲಕ್ಷ | 3.17 ಲಕ್ಷ |
| 5. | ಪ್ರತಿ ಲಕ್ಷ ಕಿ.ಮೀ.ಗೆ ಅಪಘಾತ | 3.41 | 1.03 |
| 6. | ಪ್ರತಿ 10000 ಕಿ.ಮೀ.ಗೆ ಬ್ರೇಕ್‌ಡೌನ್‌ಗಳು | 6.03 | 3.62 |

ಸುಭಾಷ್‌ನಗರದಲ್ಲಿ ಒಂದು ಹೊಸ ಡಿಪೋ ತೆಗೆಯಲು ಉದ್ದೇಶಿಸಲಾಗಿದೆ.

**ಪೋಲೀಸ್ ಅಧಿಕಾರಿಗಳಿಂದ ಮತ್ತು ಬಸ್ ಕಂಡಕ್ಟರ್‌ಗಳಿಂದ ಮಹಿಳೆಯರಿಗೆ ಉಂಟಾಗುತ್ತಿರುವ ಕಿರುಕುಳ ಕುರಿತು ನಡೆದ ಚರ್ಚೆ**

ಬಿ. ಪುಟ್ಟಸ್ವಾಮಯ್ಯ: ಈ ರಾಜ್ಯದಲ್ಲಿ ಮಹಿಳೆಯರ ಮಾನಭಂಗ ನಾನಾ ರೀತಿಯಿಂದ ನಡೆಯುತ್ತಿದೆ. ಈ ಬಗ್ಗೆ ನಾನು ಗಮನ ಸೆಳೆಯುವ ಸೂಚನೆ ಕಳಿಸಿದ್ದೆ. ಕಂಡಕ್ಟರ್‌ಗಳು ಮಹಿಳೆಯರ ಮಾನಭಂಗ ಮಾಡುತ್ತಿದ್ದಾರೆ, ಮಾನ್ಯ ಅಜೀಜ್‌ಸೇಟ್‌ರು ಸಿಕ್ಕುವುದೇ ಕಷ್ಟ.

**ಶ್ರೀ ಅಜೀಜ್‌ಸೇಟ್:** ಗ್ರಾಮಾಂತರ ಮಹಿಳೆಯರ ವಿಷಯವಾಗಿ ಮಾನ್ಯ ಸದಸ್ಯರು ಹೇಳುತ್ತಿದ್ದಾರೆಂಬುದು ನನಗೆ ಗೊತ್ತು. ಅದನ್ನು ವಿಚಾರ ಮಾಡಲು ನನಗೆ ನ್ಯಾಯವಾಗಿ ಕಾಲಾವಕಾಶ ಕೊಡಬೇಕು. ಯಾರು ಹೇಳದೇ ಇದ್ದರೂ ನನ್ನ ಕರ್ತವ್ಯವನ್ನು ನಾನು ನ್ಯಾಯವಾಗಿ ಮಾಡಬೇಕೆಂಬುದು ಧರ್ಮ. ಹೆಣ್ಣುಮಕ್ಕಳು ಯಾರೇ ಇರಲಿ ಅವರೆಲ್ಲರೂ ನಮ್ಮ ರಾಷ್ಟ್ರದ ಹೆಣ್ಣುಮಕ್ಕಳೇ ಯಾರ ಮೇಲೆ ತಪ್ಪು ಕಂಡುಬಂದರೂ ಅವರ ಬಗ್ಗೆ ಸೂಕ್ತಕ್ರಮವನ್ನು ತಕ್ಷಣ ತೆಗೆದುಕೊಳ್ಳುತ್ತೇನೆ.

**ಶ್ರೀ ಬಿ. ಪುಟ್ಟಸ್ವಾಮಯ್ಯ:** ಒಬ್ಬ ಪೋಲೀಸ್ ಕಾನ್‌ಸ್ಟೇಬಲ್ ಹೆಣ್ಣುಮಕ್ಕಳ ಮಾನಭಂಗ ಮಾಡುತ್ತಿದ್ದರೆ ಗೃಹಮಂತ್ರಿಗಳು ಏನು ಮಾಡುತ್ತಿದ್ದಾರೆ. ಬಸ್‌ಗಳನ್ನು ಸ್ಟ್ಯಾಂಡಿಗೆ ತೆಗೆದುಕೊಂಡು ಹೋಗುವ ಬದಲು ಬಾರಿಗೆ ತೆಗೆದುಕೊಂಡು ಹೋದರೆ ಸಾರಿಗೆ ಮಂತ್ರಿಗಳು

---

ವಿಸನದಿ: 1-12-1972

ಏನು ಕ್ರಮ ತೆಗೆದುಕೊಳ್ಳುತ್ತಿದ್ದಾರೆ? ಸಾರಿಗೆ ಖಾತೆಯ ಮಂತ್ರಿಗಳು ಹೆಚ್ಚು ಗಮನ ಕೊಟ್ಟು ತಮ್ಮ ಇಲಾಖೆಯ ಆಡಳಿತ ನಿರ್ವಹಣೆಯಲ್ಲಿ ಹೆಚ್ಚಿಗೆ ಬಂದೋಬಸ್ತು ಇರುವಂತೆ ಮಾಡಬೇಕು.

ಶ್ರೀ ಅಜೀಜ್‌ಸೇಟ್: ಈ ಸಭೆಯಲ್ಲಿ ಹೆಚ್ಚು ಸಂಖ್ಯೆಯಲ್ಲಿರುವ ಗಂಡಸರ ಮೇಲೆ ಈ ಸಭೆಯ ಅಧ್ಯಕ್ಷಿಣಿಯಾಗಿ ಒಬ್ಬ ಹೆಣ್ಣು ಮಗಳು ಕಂಟ್ರೋಲ್ ಇಟ್ಟಿದ್ದಾರೆ. 54 ಕೋಟಿ ಜನಸಂಖ್ಯೆಯ ಮೇಲೆ ಒಬ್ಬ ಪ್ರಧಾನಮಂತ್ರಿ ಹೆಣ್ಣುಮಗಳು ಕಂಟ್ರೋಲ್ ಇಟ್ಟಿದ್ದಾರೆ. ಅಂದಮೇಲೆ ಲೇಡಿಸ್ ಹೆಲ್ಪ್‌ಲೆಸ್ ಅಲ್ಲ. ಆದ್ದರಿಂದ ಮಾನ್ಯ ಸದಸ್ಯರು ಅಷ್ಟು ವಿಶೇಷವಾಗಿ ಇಂತಹ ವಿಷಯಗಳನ್ನು ಹೇಳಬಾರದು.

## ಮೋಟಾರ್ ವಹಿಕಲ್ಸ್ ಮೈಸೂರು ತಿದ್ದುಪಡಿ ವಿಧೇಯಕ 1973ರ ಮಂಡನೆ ಕುರಿತು ಚರ್ಚೆ.

ಶ್ರೀ ಅಜೀಜ್‌ಸೇಟ್: (ಕಾರ್ಮಿಕ ಸಚಿವರು) ಮೇಡಂ, ನಾನು 1973ರ ಮೋಟಾರ್ ವಹಿಕಲ್ಸ್ (ಮೈಸೂರು ಅಮೆಂಡ್‌ಮೆಂಟ್ಸ್) ಬಿಲ್ ಅನ್ನು ಮಂಡಿಸಲು ನಿಮ್ಮ ಅನುಮತಿ ಕೋರುತ್ತೇನೆ.

ಮೋಟಾರ್ ವಹಿಕಲ್ಸ್ ಕಾಯ್ದೆ 1939ರ ಕಲಂ ನಂ. 4ರನ್ವಯ ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರಕ್ಕೆ ಒಂದು ಆರ್.ಟಿ.ಎ.ಯನ್ನು ಸ್ಥಾಪಿಸಲಾಗಿತ್ತು ಮತ್ತು ಸಧ್ಯ ಕಾನೂನಿನ್ವಯ ಮತ್ತೊಂದು ಆರ್.ಟಿ.ಎ. ಅನ್ನು ಸ್ಥಾಪಿಸಲು ಸಾಧ್ಯವಾಗುವುದಿಲ್ಲ. ಈಗ ಹಾಲಿ ಬೆಂಗಳೂರಿನಲ್ಲಿರುವ ಆರ್.ಟಿ.ಎ. ಬೆಂಗಳೂರು ಮತ್ತು ಗ್ರಾಮಾಂತರ ಎರಡಕ್ಕೂ ಒಂದೇ ಆಗಿದ್ದು, ಹಾಲಿ ಬೆಂಗಳೂರು ನಗರದಲ್ಲಿ ತೀವ್ರ ಒತ್ತಡದಿಂದ ಬೆಳೆಯುತ್ತಿರುವ ವಾಹನಗಳ ನೋಂದಣಿ ಮಾಡುವ ಕಾರ್ಯದ ಮೇಲೆ ಹೆಚ್ಚು ಒತ್ತಡ ಬೆಳೆಯುತ್ತಿದೆ. ಸಧ್ಯ ಇರುವ ಪರಿಸ್ಥಿತಿಯಲ್ಲಿ ಈ ಹೆಚ್ಚುತ್ತಿರುವ ಬೇಡಿಕೆಯನ್ನು ಸಮರ್ಥವಾಗಿ ನಿಭಾಯಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಮದ್ರಾಸು ನಗರದಲ್ಲಿರುವಂತೆ ಬೆಂಗಳೂರು ನಗರಕ್ಕೆ ಪ್ರತ್ಯೇಕ ಆರ್.ಟಿ.ಎ. ಯನ್ನು ಆರಂಭಿಸಲು ಈ ತಿದ್ದುಪಡಿ ತಂದಿರುತ್ತೇವೆ.

ಆದರೊಂದಿಗೆ ಕಾಂಟ್ರಾಕ್ಟ್ ಕ್ಯಾರೇಜ್ ವ್ಯವಸ್ಥೆಯ ವಾಹನಗಳಿಗೆ ನೋಂದಣಿ ನೀಡುವ ಅಧಿಕಾರವೂ ಆರ್.ಟಿ.ಎ. ನವರಿಗೆ ಇದೆ. ಇದರಿಂದ ಈ ಕಾಂಟ್ರಾಕ್ಟ್ ಕ್ಯಾರೇಜ್ ನೋಂದಣಿ ಪಡೆದ ವಾಹನಗಳು ರಾಷ್ಟ್ರೀಯ ಹೆದ್ದಾರಿ ಮತ್ತು ಇನ್ನಿತರ ರಸ್ತೆಗಳಲ್ಲಿ ಜನರನ್ನು ತುಂಬಿಕೊಂಡು ಪ್ರಯಾಣ ಮಾಡುವುದರಿಂದ ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ನಷ್ಟವಾಗುತ್ತಿದೆ. ಈ ನಷ್ಟವನ್ನು ತಡೆಯಲು ಮತ್ತು ಯದ್ವಾತದ್ವಾ ಬೆಳೆಯುತ್ತಿರುವ ಕಾಂಟ್ರಾಕ್ಟ್ ಕ್ಯಾರೇಜ್ ವಾಹನಗಳ ಮೇಲೆ ನಿಗಾ ಇಡಲು ಈ ವಾಹನಗಳಿಗೆ ನೋಂದಣಿ ನೀಡುವ ಅಧಿಕಾರವನ್ನು ಆರ್.ಟಿ.ಎ. ಯಿಂದ ತಪ್ಪಿಸಿ ಎಸ್.ಟಿ.ಎ. ಗೆ ವಹಿಸಿಕೊಡಲು ಈ ತಿದ್ದುಪಡಿ ತರಲಾಗಿದೆ. ಇದನ್ನು ಮಾನ್ಯ ಸದಸ್ಯರು ಅನುಮೋದಿಸಿ ತಮ್ಮ ಒಪ್ಪಿಗೆ ನೀಡಬೇಕೆಂದು ವಿನಂತಿಸುತ್ತೇನೆ.

ಶ್ರೀ ಟಿ.ಆರ್. ಶಾಮಣ್ಣ: ಮಾನ್ಯರೇ ಈ ತಿದ್ದುಪಡಿಯಲ್ಲಿ ಒಂದು ಅಂಶವನ್ನು ಒಪ್ಪಬೇಕಾಗಿದೆ. ಏಕೆಂದರೆ, ಬೆಂಗಳೂರಿನಲ್ಲಿ ಮೋಟಾರು ವೆಹಿಕಲ್ಸ್‌ಗೆ ರಿಜಿಸ್ಟ್ರೇಷನ್ ನಡೆಯುತ್ತಿದ್ದ ಬೆಂಗಳೂರು ನಗರಕ್ಕೆ ಪ್ರತ್ಯೇಕ ಮಾಡಿದರೆ ಮುಂದೆ ಅನುಕೂಲವಾಗುತ್ತದೆಯೆಂದು ಭಾವಿಸುತ್ತೇನೆ. ಆದರೆ ಕಾಂಟ್ರಾಕ್ಟ್ ಕ್ಯಾರೇಜಸ್‌ಗೆ ಎಷ್ಟು ತಿದ್ದುಪಡಿ ತಂದರೂ ಅದರಿಂದ ಲಂಚ ರುಷುವತ್ತು ಜಾಸ್ತಿಯಾಗಿ ಮತ್ತೆ ಮೊದಲಿನ ಪರಿಸ್ಥಿತಿಯೇ ಇರುತ್ತದೆಯೆಂದು ಹೇಳುತ್ತೇನೆ. ಇದಕ್ಕೆ ಕಾರಣ ಸರ್ಕಾರಿ ಬಸ್‌ಗಳು ಸರಿಯಾದ ಸಮಯಕ್ಕೆ ಬರುವುದಿಲ್ಲ. ರಾಜ್ಯ ಸರ್ಕಾರಿ ಬಸ್‌ನಲ್ಲಿ ಎಷ್ಟು ಜನ ಓಡಾಡುತ್ತಾರೋ ಅಷ್ಟೇ ಜನ ಕಾಂಟ್ರಾಕ್ಟ್ ಕ್ಯಾರೇಜಸ್‌ಗಳಲ್ಲಿ ಓಡಾಡುತ್ತಾರೆಯೆಂದರೆ ತಪ್ಪಿಲ್ಲ.

ವಿಸನದಿ: 3.9.1973

ಸರ್ಕಾರಿ ಬಸ್ಸಿನಲ್ಲಿ ಹೆಚ್ಚಿನ ಸೌಲಭ್ಯವಿದ್ದರೆ ಕಾಂಟ್ರಾಕ್ಟ್ ಕ್ಯಾರೇಜಸ್‌ಗೆ ಜನ ಏಕೆ ಹೋಗುತ್ತಾರೆ?

ಶ್ರೀ ಅಜೀಜ್‌ಸೇಟ್: ಇವರು ಒಂದು ಕಡೆ ಸಂಸ್ಥೆಯ ಆಡಳಿತ ಬಿಗಿಗೊಳಿಸಲು ಹೇಳುತ್ತಾರೆ. ಮತ್ತೊಂದೆಡೆ ಟಿಕೇಟ್ ರಹಿತ ಪ್ರಯಾಣಿಕರಿಗೆ ದಂಡ ಹಾಕಿದರೆ ಪ್ರತಿಭಟಿಸುತ್ತಾರೆ. ಈ ರೀತಿಯ ಸಮಾಜವಾದ ಅರ್ಥವಾಗುತ್ತಿಲ್ಲ.

ಶ್ರೀ ಪುಟ್ಟಸ್ವಾಮಯ್ಯ: ಮಾನ್ಯ ಸದಸ್ಯರ ಹಕ್ಕಿಗೆ ಚ್ಯುತಿ ತರುವ ವಿಚಾರವನ್ನು ಮಂತ್ರಿಗಳು ಹೇಳಿದ್ದಾರೆ. ಅವರು ಅದನ್ನು ವಾಪಸು ಪಡೆಯಬೇಕು. ಜಟಕ ಹೊಡೆಯುವವರು ಹೇಳುವಂತೆ ಹೇಳುವುದು ಸರಿಯಲ್ಲ. ನಮಗೆ ಸೂಚನೆ ಕೊಡುವಂತೆ ಅಧ್ಯಕ್ಷರು ಮಂತ್ರಿಗಳಿಗೂ ಕೊಟ್ಟು ಅವರನ್ನು ಹಿಡಿತದಲ್ಲಿಡಬೇಕಾದ್ದು ಕರ್ತವ್ಯ.

ಶ್ರೀ ಕೆ.ಹೆಚ್. ಹನುಮೇಗೌಡ: ಪ್ರಜೆಗಳಿಂದ ವಸೂಲ್ಮಾಡಲಾದ 40 ಕೋಟಿ ರೂಪಾಯಿಗಳನ್ನು ಈ ದಿವಸ ಎಂ.ಎಸ್.ಆರ್.ಟಿ.ಸಿ. ಯಲ್ಲಿ ತೊಡಗಿಸಿದ್ದೇವೆ. ಜನರು ಈ ದಿನ ಬಸ್ಸುಗಳಲ್ಲಿ ಪ್ರಯಾಣ ಮಾಡಬೇಕಾದರೆ ಪಡಬಾರದ ತೊಂದರೆಗಳನ್ನು ಪಡುತ್ತಿದ್ದಾರೆ. ಈ ವಿಚಾರ ಹಲವಾರು ಸರ್ತಿ ಮಾನ್ಯ ಸಚಿವರ ಗಮನಕ್ಕೆ ತರಲಾಗಿದೆ.

ಸಿ. ಭೈರೇಗೌಡ: ಈ ಸರ್ಕಾರಕ್ಕೆ ಸಮಾಜವಾದದಲ್ಲಿ ನಂಬಿಕೆಯಿದ್ದರೆ ಸರಿಯಾಗಿ ಬಸ್‌ಗಳನ್ನು ನಡೆಸಿ ಜನರಿಗೆ ಅನುಕೂಲ ಮಾಡಿಕೊಡಲಿ, ಅದಕ್ಕೆ ಪೋಲೀಸ್ ಪರ್ಮಿಟ್ಟಿನ ಬಸ್‌ಗಳನ್ನು ಕೂಡಲೇ ನಿಲ್ಲಿಸಬೇಕೆಂದು ಹೇಳುತ್ತೇನೆ.

ಶ್ರೀ ಅಜೀಜ್‌ಸೇಟ್: ಪೋಲೀಸ್ ಪರ್ಮಿಟ್ಟಿನ ಬಸ್‌ಗಳು ಯಾವುವು?

ಶ್ರೀ ಸಿ. ಭೈರೇಗೌಡ: ಸರ್ಕಾರದವರು ನೇಮಕ ಮಾಡಿದ ಸ್ಕ್ವಾಡ್‌ನವರಿಗೆ ಆಚಾರ ಹಣ ಕೊಟ್ಟು ಓಡಿಸುತ್ತಿರುವ ಬಸ್‌ಗಳಿಗೆ ಪರ್ಮಿಟ್ ಬಸ್‌ಗಳೆನ್ನುತ್ತಾರೆ. ಈ ಸರ್ಕಾರ ಕಿವುಡು, ನಾವು ಏನು ಮಾತನಾಡಿದರೂ ಪ್ರಯೋಜನವಿಲ್ಲ.

ಶ್ರೀ ಅಜೀಜ್‌ಸೇಟ್: ವಿನಾಕಾರಣ ಎಂ.ಎಸ್.ಆರ್.ಟಿ.ಸಿ. ಬಸ್‌ಗಳ ಬಗ್ಗೆ ಟೀಕೆ ಟಿಪ್ಪಣಿಗಳನ್ನು ಮಾಡಿ ಜನಗಳಲ್ಲಿ ಇವುಗಳ ಬಗ್ಗೆ ತಪ್ಪು ಅರ್ಥ ಬರುವಂತೆ ಮಾತನಾಡಿದರೆ ಅದರಿಂದ ತೊಂದರೆಯಾಗುತ್ತದೆ. ಕಾರ್ಮಿಕರು ಕಳ್ಳರು ಎಂದರೆ ಹೇಗೆ?

ಶ್ರೀ ಕೋಣಂದೂರು ಲಿಂಗಪ್ಪ: ಅಲ್ಲಿನ ಕಾರ್ಮಿಕರು ಕಳ್ಳರು ಎಂಬ ಅಭಿಪ್ರಾಯ ನಮಗೆ ಇಲ್ಲ. ಕಾರ್ಮಿಕ ಸಚಿವರು ಈ ರೀತಿಯಾಗಿ ಹೇಳುತ್ತಿದ್ದಾರೆ. ಅದು ಅವರ ಬಾಯಿಂದಲೇ ಬರುತ್ತಿದೆ. ಇದು ಬಹಳ ಖೇದವಾದ ವಿಚಾರ.

ಶ್ರೀ ಅಜೀಜ್‌ಸೇಟ್: ರಾಷ್ಟ್ರೀಕರಣಗೊಳಿಸಿದ ಸಂಸ್ಥೆಗಳ ಬಗ್ಗೆ ನಿಂದನೆ ಮಾಡುವ ಬದಲು ಅದಕ್ಕೆ ಸಲಹೆಯನ್ನು ನೀಡಿದರೆ ಸಂಸ್ಥೆಗಳನ್ನು ಉತ್ತಮಗೊಳಿಸಲು ಸಹಾಯವಾಗುತ್ತದೆ. ನೀವು ಹೇಳುವ ರೀತಿ ನೋಡಿದರೆ ಎಂ.ಎಸ್.ಆರ್.ಟಿ.ಸಿ. ಬಸ್ಸಿನಲ್ಲಿ ಕುಳಿತುಕೊಳ್ಳುವುದು ಜೀವಕ್ಕೆ ಅಪಾಯ ಎಂದು ಅನ್ನಿಸುತ್ತದೆ. ಅದು ಸರಿಯಲ್ಲ.

ಶ್ರೀ ಪುಟ್ಟಸ್ವಾಮಯ್ಯ: ಕಾರ್ಮಿಕರು ಕಳ್ಳರು ಎಂದು ನಾವು ಹೇಳಲಿಲ್ಲ. ಮಾನ್ಯ ಮಂತ್ರಿಗಳಿಗೆ ಸ್ವಲ್ಪ ಸ್ಮೃತಿ ತಪ್ಪಿರುವ ಹಾಗಿದೆ.

ಶ್ರೀ ಸಿ. ಭೈರೇಗೌಡ; ಮಾನ್ಯ ಸಚಿವರ ವರ್ತನೆ ಸರಿಯಿಲ್ಲ, ಅವರ ತಲೆಯ ಮೇಲೆ ಬೇಕಾದರೆ ಪೇಪರ್ ಹೊಡೆಯುತ್ತೇನೆ.

ಶ್ರೀ ಕೊಣಂದೂರು ಲಿಂಗಪ್ಪ: ಮಾನ್ಯ ಸಚಿವರು ಮೇಜು ಕುಟ್ಟಿ ನಮ್ಮನ್ನು ಕೂರಿಸುವುದಕ್ಕೆ ಆಗುವುದಿಲ್ಲ.

ಶ್ರೀ ಅಜೀಜ್‌ಸೇಟ್: ನಾನು ಕೇಳಿದ್ದೇನೆ. ಮಾನ್ಯ ಸದಸ್ಯರು ನನ್ನ ತಲೆಮೇಲೆ ಹೊಡೆಯುತ್ತೇನೆ ಎಂದು ಹೇಳಿದರು. ನನಗೂ ಆ ರೀತಿ ಹೇಳುವುದಕ್ಕೆ ಅಧಿಕಾರ ಇದೆ. ಆದರೆ ನಾನು ಆ ಮಟ್ಟಕ್ಕೆ ಹೋಗುವುದಿಲ್ಲ.

ಶ್ರೀ ಟಿ.ಆರ್. ಶಾಮಣ್ಣ: ಬೆಂಗಳೂರು ನಗರ ಸಾರಿಗೆಯನ್ನು ಖಾಸಗಿಯವರಿಗೆ ವಹಿಸಲಾಗುವುದು ಎಂಬ ಸುದ್ದಿ ಇದೆ. ಇದು ನಿಜವೆ?

ಶ್ರೀ ಅಜೀಜ್‌ಸೇಟ್: ನಾನು ಕಳೆದ ಬಾರಿ ಮಾತನಾಡುವಾಗ ಬೆಂಗಳೂರು ನಗರ ಸಾರಿಗೆ ವ್ಯವಸ್ಥೆ ಹದಗೆಟ್ಟಿದ್ದು, ಅದನ್ನು ಸರಿಪಡಿಸಬೇಕಾಗಿದೆ ಎಂದು ಹೇಳಿದೆ. ಖಾಸಗಿಯವರಿಗೆ ವಹಿಸುವುದಾಗಿ ಎಲ್ಲಿಯೂ ತಿಳಿಸಿಲ್ಲ.

ಉಪಾಧ್ಯಕ್ಷರು: ಪ್ರಶ್ನೆ ಏನೆಂದರೆ,

ಮೋಟಾರು ವಾಹನ (ಮೈಸೂರು ತಿದ್ದುಪಡಿ) ಬಿಲ್-1973 ಅನ್ನು ಅನುಮೋದಿಸಲಾಗಿದೆ.

ಮಸೂದೆಯನ್ನು ಅನುಮೋದಿಸಲಾಯಿತು.

## ಕಿಂಕೊ ಹಸ್ತಾಂತರದ ಕುರಿತಾದ ಮಸೂದೆ ಮಂಡನೆ ಬಗ್ಗೆ ಚರ್ಚೆ.

ಶ್ರೀ ಅಜೀಜ್‌ಸೇಟ್ (ಕೈಗಾರಿಕಾ ಮತ್ತು ವಾಣಿಜ್ಯ ಸಚಿವರು): ಸ್ವಾಮಿ, ಕರ್ನಾಟಕ ರೇಡಿಯೋ ಮತ್ತು ಎಲೆಕ್ಟ್ರಿಸಿಟಿ ಕಂಪನಿಯ ಶೇರುಗಳ ಹಸ್ತಾಂತರ ಮಸೂದೆ 1978ನ್ನು ಅನುಮೋದನೆಗಾಗಿ ಮಂಡಿಸಲು ಅನುಮತಿ ಕೋರುತ್ತಿದ್ದೇನೆ.

ಇದು ಸುಗ್ರೀವಾಜ್ಞೆಯ ಬದಲಾಗಿ ಮಂಡಿಸಲಾದ ಬಿಲ್. ಕಿಂಕೊ ಕಂಪನಿಯು ಮೀಟರು, ಕೇಬಲ್, ಕೆಪಾಸಿಟರ್ ಇತ್ಯಾದಿಗಳನ್ನು ತಯಾರಿಸುತ್ತಿದ್ದು 1974-75ರಲ್ಲಿ ಸಂಚಿತ ನಷ್ಟ 375.54 ಲಕ್ಷ. ಅದರ ಬಂಡವಾಳ 212.50 ಲಕ್ಷ. ಬಂಡವಾಳದ ಶೇಕಡ 80 ರಾಜ್ಯ ಸರ್ಕಾರದ್ದು, ಉಳಿದ 10 ಭಾಗ ಜನಸಾಮಾನ್ಯರಿಂದ 3.8 ಶೇಕಡ ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ ಮತ್ತು ಎಲ್.ಐ.ಸಿ. ಮುಂತಾದ ಸಂಸ್ಥೆಗೆ ಸೇರಿದ್ದು, ಅದರ ಒಟ್ಟು ಮೊತ್ತ ರೂ. 29.86 ಲಕ್ಷ. ಈಗ ಪ್ರತಿ 10 ರೂ. ಮುಖಬೆಲೆಯ ಶೇರುಗಳನ್ನು ರೂ. 3 ರಂತೆ ನೀಡಿ ಹಸ್ತಾಂತರಿಸಿದೆ ಸುಗ್ರೀವಾಜ್ಞೆಯ ಪೂರಕವಾಗಿ ಈ ಮಸೂದೆ ಮಂಡಿಸಲಾಗಿದೆ.

ಶ್ರೀ. ಎಸ್.ಆರ್. ಬೊಮ್ಮಾಯಿ: ಕಿಂಕೊ ಹೆಸರುವಾಸಿಯಾದ ಪ್ರಸಿದ್ಧ ಸಂಸ್ಥೆ. ಈ ಸಂಸ್ಥೆ ರಾಜ್ಯ ಸರ್ಕಾರದ ಕೈತಪ್ಪಿ ಕೇಂದ್ರ ಸರ್ಕಾರದ ಒಂದು ಸಂಸ್ಥೆಗೆ ಹೋಗುತ್ತಾ ಇದೆ. ಇದು ಸಂತೋಷದ ಸಂಗತಿಯಲ್ಲ. ಈ ಸಂಸ್ಥೆಯಲ್ಲಿ ತಯಾರಿಸಿದ ಎಲೆಕ್ಟ್ರಿಸಿಟಿ ಬೋರ್ಡ್‌ಗಳನ್ನು ರಾಜ್ಯ ವಿದ್ಯುಚ್ಛಕ್ತಿ ಮಂಡಲಿ ಕೊಳ್ಳದೇ ಹೋದರೆ ಈ ಸಂಸ್ಥೆ ಯಾವ ರೀತಿ ಬಾಳಬೇಕು. ಇದು ಸರ್ಕಾರದ ಕಾರ್ಖಾನೆಗಳಲ್ಲಿ ಮತ್ತು ಮಂಡಲಿ ಬೋರ್ಡ್‌ಗಳಲ್ಲಿ ಸಮನ್ವಯದ ಕೊರತೆಯನ್ನು ತೋರಿಸುತ್ತದೆ.

ಶ್ರೀ ಸಿ.ಎಂ. ಆರ್ಮುಗಂ: ಮಾನ್ಯರೇ ನಾನು ಕಿಂಕೊ ಸಂಸ್ಥೆಯನ್ನು ಬಿ.ಹೆಚ್.ಇ.ಎಲ್. ಸಂಸ್ಥೆಗೆ ವರ್ಗಾಯಿಸಿದ್ದನ್ನು ಸ್ವಾಗತಿಸುತ್ತೇನೆ. ಸಂಸ್ಥೆಯ ಕಾರ್ಮಿಕರು ಮತ್ತು ಜನರ ಅಭಿಪ್ರಾಯವೂ ಇದೇ ಆಗಿತ್ತು. 1975-76ರ ವಾರ್ಷಿಕ ವರದಿಯಲ್ಲಿ ಕಿಂಕೊ ಪುನರುಜ್ಜೀವನದ ಕುರಿತಾದ ಕೆಲವು ಸಲಹೆಗಳನ್ನು ನೀಡಲಾಗಿತ್ತು. ಆ ಸಮಿತಿಗಳ ಸಲಹೆಯೇನಾಯಿತು ಎಂಬುದರ ಬಗ್ಗೆ ನಾನು ಮಾನ್ಯ ಮಂತ್ರಿಗಳಿಂದ ವಿವರವನ್ನು ಪಡೆಯಲಿಚ್ಛಿಸುತ್ತೇನೆ.

ಶ್ರೀ ಅಜೀಜ್‌ಸೇಟ್: ಇದು ಕೇವಲ ಸುಗ್ರೀವಾಜ್ಞೆಯನ್ನು ಮಸೂದೆಯಾಗಿ ಮಂಡಿಸುತ್ತಿರುವುದು, ಈಗಾಗಲೇ ಈ ವಿಷಯ ಮುಚ್ಚಿದೆ. ಹಳೆಯ ಗೋರಿಯನ್ನು ಕೆದಕುವುದರಿಂದ ಯಾವ ಪ್ರಯೋಜನವಿಲ್ಲ. ಈಗ ಮುಂದೆ ಏನು ಮಾಡಬೇಕೆಂದು ತೀರ್ಮಾನವಾಗಬೇಕಾಗಿದೆ. ನಮ್ಮ ರಾಜ್ಯ ಸರ್ಕಾರದ ಒಂದು ಸಂಸ್ಥೆಯನ್ನು ಕೇಂದ್ರಕ್ಕೆ ವಹಿಸಲಾಗುತ್ತಿದೆ.

---

ವಿಸನದಿ: 22-3-1978

ಶ್ರೀ ಕೆ. ಪುಟ್ಟಸ್ವಾಮಿ: ನನಗೆ ಮಾನ್ಯ ಮಂತ್ರಿಗಳ ಉತ್ತರದಿಂದ ಖೇದವಾಗುತ್ತಿದೆ. ಸುಗ್ರೀವಾಜ್ಞೆ ಮಾಡಿದ ತಕ್ಷಣ ಸದಸ್ಯರ ಮಾಹಿತಿ ಪೂರೈಕೆಯ ಹಕ್ಕುಗಳನ್ನು ಮೊಟಕುಗೊಳಿಸಲಾಗುವುದಿಲ್ಲ. ಸರ್ಕಾರಕ್ಕೆ ಈ ಸದನದ ಅನುಮತಿಯಿಲ್ಲದೇ ಯಾವ ವಿಚಾರವನ್ನು ಮುಕ್ತಾಯಗೊಳಿಸಲು ಸಾಧ್ಯವಿಲ್ಲ. ನಾನು ಸರ್ಕಾರದಿಂದ ಚರ್ಚೆಗೆ ಪೂರಕವಾದ ಕೆಲವು ಮಾಹಿತಿಗಳನ್ನು ಕೋರುತ್ತಿದ್ದೇನೆ.

ಶ್ರೀ ಅಜೀಜ್‌ಸೇಟ್: ನಾನು ಈ ಮಾಹಿತಿಯನ್ನು ಉತ್ತರಿಸುವಾಗ ನೀಡುತ್ತೇನೆ.

ಶ್ರೀ ಕೆ. ಪುಟ್ಟಸ್ವಾಮಿ: ನಮಗೆ ಚರ್ಚೆಗೆ ಮೊದಲು ಮಾಹಿತಿ ಬೇಕಾಗಿದೆ. ಚರ್ಚೆ ಮುಗಿದ ನಂತರ ಸಿಕ್ಕಿದರೆ ಅದರಿಂದ ಏನು ಪ್ರಯೋಜನ?

ಅಧ್ಯಕ್ಷರು: ಮಾನ್ಯ ಮಂತ್ರಿಗಳು ಮಾಹಿತಿ ನೀಡುವ ಸ್ಥಿತಿಯಲ್ಲಿದ್ದೀರಾ?

ಶ್ರೀ ಅಜೀಜ್‌ಸೇಟ್: ನಾನು ಮಾಹಿತಿಯನ್ನು ಪಡೆಯುತ್ತಿದ್ದೇನೆ.

ಶ್ರೀ ಎಸ್.ಆರ್. ಬೊಮ್ಮಾಯಿ: ಕಿಂಕೋದಲ್ಲಿ ಕೋಟ್ಯಾಂತರ ರೂಪಾಯಿಗಳನ್ನು ಸರ್ಕಾರ ಹಾಕಿದೆ. ಈಗ ಅದನ್ನು ಕಳೆದುಕೊಂಡಿದೆ. ಈ ಸಮಸ್ಯೆ ಅಷ್ಟು ಸಣ್ಣದಲ್ಲ. ಪ್ರತಿ ವರ್ಷವೂ ಸರ್ಕಾರದ ಹಣ ಎಷ್ಟು ನಷ್ಟವಾಗಿದೆ? ಈ ಬಗ್ಗೆ ಎಲ್ಲಾ ವಿವರಗಳನ್ನು ನೀಡಿದರೆ ಚರ್ಚೆ ಮಾಡಬಹುದು.

ಶ್ರೀ ಅಜೀಜ್‌ಸೇಟ್: ಸರ್ಕಾರದ ಶೇರಾಗಲಿ ಅಥವಾ ಖಾಸಗಿ ಶೇರು ಎಂಬ ವ್ಯತ್ಯಾಸಗಳಿಲ್ಲದೆ ಬಿ.ಹೆಚ್.ಇ.ಎಲ್.ಗೆ ರೂ. 3 ಪ್ರತಿ ಶೇರಿಗೆ ಮಾರಾಟ ಮಾಡಲಾಗಿದೆ. ಅದರಲ್ಲಿ ರೂ. 7 ಪ್ರತಿ ಶೇರಿಗೆ ನಷ್ಟವಾಗುತ್ತದೆ. ಎರಡು ಲಕ್ಷ ರೂಪಾಯಿ ಸಾಲ ಇದೆ. ಅದನ್ನು ಬಿ.ಹೆಚ್.ಇ.ಎಲ್. ತೀರಿಸುತ್ತದೆ.

ಶ್ರೀ ಟಿ.ಆರ್. ಶಾಮಣ್ಣ: ಮಾನ್ಯ ಅಧ್ಯಕ್ಷರೇ ನಮ್ಮ ಕೈಗಾರಿಕಾ ಸಚಿವರು ಪ್ರಾರಂಭದಲ್ಲಿ ಮಾಡಿದ ಧೋರಣೆ ಸರಿಯಲ್ಲ, ಅವರು ದೊಡ್ಡ ನವಾಬರು, ಯಾವುದಾದರೂ ಬಹು ಲಘುವಾಗಿ ತೆಗೆದುಕೊಂಡು ಇದು ಇಷ್ಟೆ ಎಂದು ಬಿಡುತ್ತಾರೆ.

ಶ್ರೀ ಅಜೀಜ್‌ಸೇಟ್: ನಾನು ಮಾನ್ಯ ಕೆ. ಪುಟ್ಟಸ್ವಾಮಿಯವರು ಎತ್ತಿದ ಪ್ರಶ್ನೆಗೆ ಉತ್ತರವನ್ನು ಪಡೆಯಲು ಯತ್ನಿಸುತ್ತಿದ್ದೇನೆ. ನೀವು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಉತ್ತರವಿದೆ. ಆದರೆ ಮಾನ್ಯ ಪುಟ್ಟಸ್ವಾಮಿಯವರು ಹೊಸ ಪ್ರಶ್ನೆಗಳನ್ನು ಎತ್ತಿರುವುದರಿಂದ ಅದಕ್ಕೆ ಉತ್ತರ ಪಡೆಯಲು ಪ್ರಯತ್ನಿಸುತ್ತಿದ್ದೇನೆ. ನಾನು 1962ರ ಮುಂಚೆ ಏನು ನಡೆದಿತ್ತು ಮತ್ತು 1972ರಲ್ಲಿ ಸರ್ಕಾರವು ಈ ಕಾರ್ಖಾನೆಯನ್ನು ಉಳಿಸಿಕೊಳ್ಳಲು ಯಾವ ಪ್ರಯತ್ನ ನಡೆಸಿತು ಎಂಬ ಬಗ್ಗೆ ವಿವರಗಳನ್ನು ಪಡೆದು ತಿಳಿಸುತ್ತೇನೆ.

## ಹತ್ತಿ ಗಿರಣಿ ಸಂಬಂಧಿತ ಚರ್ಚೆ.

ಶ್ರೀ ಎಂ.ಜಿ. ಜರತಾರ್‌ಫರ್: ನಾನು ಮಹದೇವ ಹತ್ತಿಗಿರಣಿ ಸಂಬಂಧ ಕೆಲವು ವಿಷಯಗಳನ್ನು ತಿಳಿಸಲು ಇಚ್ಛಿಸುತ್ತೇನೆ. ಈ ಗಿರಣಿ ಮುಚ್ಚಿರುವುದರಿಂದ ಕಾರ್ಮಿಕರು ಮನೆ ಸಾಮಾನುಗಳನ್ನು ಮಾರಿಕೊಂಡು ಜೀವನ ನಡೆಸುತ್ತಿದ್ದಾರೆ. ಕಾರ್ಮಿಕ ಬಂಧುಗಳು ಎಷ್ಟೋ ಬಾರಿ ಸಚಿವರನ್ನು ಭೇಟಿಯಾದರೂ ಪ್ರತಿ ಬಾರಿಯೂ ಆಶ್ವಾಸನೆಗಳು ಮಾತ್ರ ಕೇಳಿದ್ದಾರೆ. ಅಲ್ಲದೆ ಕಳೆದ 30 ರಂದು ನಾವು ಕೈಗಾರಿಕಾ ಸಚಿವರನ್ನು ಭೇಟಿಯಾದಾಗ ಈ ಅಧಿವೇಶನದಲ್ಲಿ ಮಹದೇವ ಹತ್ತಿ ಗಿರಣಿಯ ವಿಚಾರವನ್ನು ಪೂರ್ತಿಯಾಗಿ ಚರ್ಚಿಸಿ ಅವರಿಗೆ ವೇತನ ನೀಡುವಂತೆ ಮಾಡಿ ಗಿರಣಿಯ ಪುನರಾರಂಭ ಮಾಡುತ್ತೇನೆ ಎಂದು ತಿಳಿಸಿದ್ದಾರೆ. ಈ ಬಗ್ಗೆ ತಮ್ಮ ಗಮನ ಸೆಳೆಯುತ್ತಿದ್ದೇನೆ.

ಶ್ರೀ ಅಜೀಜ್‌ಸೇಟ್: ಸರ್ಕಾರ ಈಗಿನ ಪರಿಸ್ಥಿತಿಯ ತೀವ್ರತೆಯನ್ನು ಅರಿತಿದೆ. ಮಹದೇವ ಹತ್ತಿ ಗಿರಣಿಗೆ ಸಂಬಂಧಿಸಿದಂತೆ ಹೇಳುವುದೇನೆಂದರೆ ಅದೊಂದು ಸಹಕಾರ ಕ್ಷೇತ್ರದ ಗಿರಣಿಯಾಗಿದ್ದು, ಈ ಮಿಲ್ಲಿಗೆ ಸಂಬಂಧಿಸಿದಂತೆ ತುಂಬಾ ಸಮಸ್ಯೆಗಳಿವೆ. ನನ್ನ ಮಾತಿನ ನಂತರ ವಿರೋಧಪಕ್ಷದವರು ಸಂತುಷ್ಟರಾಗಿ ತಮ್ಮ ಉದ್ವೇಗವನ್ನು ಮರೆಯುವರೆಂದು ಆಶಿಸುತ್ತೇನೆ.

ಶ್ರೀ ಎಸ್.ಆರ್. ಬೊಮ್ಮಾಯಿ : ಮಾನ್ಯ ಮಂತ್ರಿಗಳು ಹೇಳುತ್ತಿರುವುದೇನು? ನಾವಿಲ್ಲಿ ಏಕೆ ಬಂದಿದ್ದೇವೆ? ಈ ರೀತಿಯಾಗಿ ಮಾತನಾಡಬಾರದು.

ಅಧ್ಯಕ್ಷರು : ಅವರು ಮಾನ್ಯ ವಿರೋಧಪಕ್ಷದವರಲ್ಲಿ ಮನವಿ ಮಾಡುತ್ತಿದ್ದಾರೆ. ಅಷ್ಟೇ ಹೊರತಾಗಿ ನೀವು ಬೇರೆ ಅರ್ಥದಲ್ಲಿ ತೆಗೆದುಕೊಳ್ಳಬಾರದು. ನೀವು ಆವೇಶ, ಉದ್ವೇಗಕ್ಕೆ ಒಳಗಾಗಬಾರದು ಎಂದು ಕೇಳಿಕೊಳ್ಳುತ್ತೇನೆ. ಅವರ ಉತ್ತರದಿಂದ ಸಂತೋಷವಾಗಿದ್ದರೆ ಆಮೇಲೆ ಕೇಳಿ, ನಿಮಗೆ ಸಾಕಷ್ಟು ಸಮಯಾವಕಾಶವಿದೆ.

ಶ್ರೀ ಎಸ್.ಆರ್. ಬೊಮ್ಮಾಯಿ: ಬೆಂಗಳೂರು ಮಿನರ್ವ ಮತ್ತು ನ್ಯಾಷನಲ್ ಟೆಕ್ಸ್‌ಟೈಲ್ಸ್ ಕಾರ್ಪೊರೇಷನ್‌ಗೆ ಸಹಾಯ ಮಾಡಿದ್ದೀರಿ. ಇದರ ಜೊತೆಗೆ ಗುಲ್ಬರ್ಗಕ್ಕೂ ಕೂಡ ಸರ್ಕಾರದವರು ಹಣ ಕೊಟ್ಟು ಸಹಾಯ ಮಾಡಿದ್ದೀರಾ?

ಶ್ರೀ ಅಜೀಜ್‌ಸೇಟ್: ಸಾಲ ಕೊಟ್ಟಿದ್ದೇವೆ.

ಶ್ರೀ ಎಸ್.ಆರ್. ಬೊಮ್ಮಾಯಿ: ಸ್ವಾಮಿ ನಾನು ಹೆಚ್ಚಿಗೆ ಏನನ್ನೂ ಹೇಳಬಯಸುವುದಿಲ್ಲ. ಕಾನೂನು ಮಾಡಿಯೋ, ತಿದ್ದುಪಡಿ ಮಾಡಿಯೋ, ಇಲ್ಲ ಅಜ್ಞೆ ಮಾಡಿಯೋ ಏನಾದರೂ ಮಾಡಿಕೊಂಡು ಈ ಗಿರಣಿಗಳನ್ನು ಎಷ್ಟು ದಿನಗಳಲ್ಲಿ ಆರಂಭಿಸುತ್ತೀರಿ ಎಂದು ತಿಳಿಸಿ.

ಶ್ರೀ ಅಜೀಜ್‌ಸೇಟ್: ಮೂವತ್ತು ದಿನಗಳಲ್ಲಿ.

---

ವಿಸನದಿ: 13-6-1978

## ಕೈಗಾರಿಕಾ ವರದಿಯ ಮೇಲೆ ನಡೆದ ಚರ್ಚೆಗೆ ಉತ್ತರ

**ಶ್ರೀ ಅಜೀಜ್‌ಸೇಟ್ (ಕೈಗಾರಿಕಾ ಮತ್ತು ವಾಣಿಜ್ಯ ಖಾತೆ ಸಚಿವರು):**

ಸಾರ್ವಜನಿಕ ಉದ್ದಿಮೆಗಳಿಗೆ ಸಂಬಂಧಿಸಿದಂತೆ ಎರಡು ಪಿ.ಎ.ಸಿ. ವರದಿಗಳು ಇರುತ್ತವೆ. ಒಂದು ವರದಿ ವಾಣಿಜ್ಯ ಮತ್ತು ಕೈಗಾರಿಕಾ ಖಾತೆಗೆ ಸಂಬಂಧಿಸಿದ್ದು.

ಪಿ.ಎ.ಸಿ. 3 ರಿಪೋರ್ಟ್ ಕರ್ನಾಟಕ ರಾಜ್ಯದ ಕೆ.ಎಸ್.ಐ.ಐ.ಡಿ.ಸಿ ಬಗ್ಗೆ ವರದಿ ನೀಡಿ ಅದರ ಸಂಬಂಧಿತ ಸಂಸ್ಥೆಗಳ ವರದಿ ನೀಡುತ್ತದೆ. ಪಿ.ಎ.ಸಿ 4 ಕರ್ನಾಟಕ ಸೋಪ್ ಮತ್ತು ಡಿಟರ್ಜೆಂಟ್ ಕಂಪನಿ ಬಗ್ಗೆ ಮತ್ತು ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿ. ಬಗ್ಗೆ ವರದಿಯಿರುತ್ತದೆ.

ಮಾನ್ಯ ಸದಸ್ಯರಾದ ಗೋವಿಂದ ಪಿ. ವಡೆಯರಾಜ್ ಮತ್ತು ಜೆ.ಹೆಚ್. ಪಟೇಲ್ ಸಾರ್ವಜನಿಕ ಉದ್ದಿಮೆಗಳ ಬಗ್ಗೆ ಮಾತನಾಡಿದ್ದಾರೆ. ವಾರ್ಷಿಕ ವರದಿಯಂತೆ ಹತ್ತು ಉದ್ದಿಮೆಗಳು ರೂ. 678-39 ಲಕ್ಷ ಲಾಭಗಳಿಸಿವೆ. 9 ಸಂಸ್ಥೆಗಳು 43'.35 ಲಕ್ಷ ನಷ್ಟ ಅನುಭವಿಸಿವೆ. ಎಂ.ಎಸ್.ಐ.ಎಲ್.ಗೆ ಸಂಬಂಧಿಸಿದಂತೆ 1974-75 ರಲ್ಲಿ 568.32 ಲಕ್ಷವಿದ್ದ ಆದಾಯ 1976-77 ರಲ್ಲಿ 1,382.17 ಲಕ್ಷಕ್ಕೆ ಏರಿದೆ.

ಶ್ರೀ ಜೆ.ಹೆಚ್. ಪಟೇಲ್: ಸಚಿವರು ಅಧಿಕಾರಿಗಳು ಕೊಟ್ಟ ಟೈಪ್ಡ್ ವರದಿಯನ್ನು ಓದುತ್ತಿದ್ದಾರೆ. ನಮಗೆ ಮಂತ್ರಿಗಳು ಅವರ ಮನದಲ್ಲಿರುವುದನ್ನು ನೇರವಾಗಿ ತಿಳಿಸಿದರೆ ಅನುಕೂಲವಾಗುತ್ತದೆ.

ಶ್ರೀ ಕೆ. ಭಾಸ್ಕರ ನಾಯ್ಡು: ಮೈಸೂರು ಪ್ರಾಂತದವರಾದ್ದರಿಂದ ಸಚಿವರು ಆ ಬಗ್ಗೆ ಹೇಳುತ್ತಿದ್ದಾರೆ. ರಾಜ್ಯದ ಪ್ರಮುಖ ಉದ್ದಿಮೆಯಾದ ವಿಜಯನಗರ ಉಕ್ಕು ಕಾರ್ಖಾನೆ ಬಗ್ಗೆ ಯಾವ ವರದಿ ನೀಡುತ್ತೀರಿ.

ಶ್ರೀ ಅಜೀಜ್‌ಸೇಟ್: ನಾನು ಆ ವಿಚಾರಕ್ಕೆ ಬರುತ್ತಿದ್ದೇನೆ. ಕೆಲವು ಪ್ರಮುಖ ಅಂಶಗಳ ಬಗ್ಗೆ ಮಾಹಿತಿ ನೀಡುತ್ತಿದ್ದೇನೆ. ಸದಸ್ಯರನ್ನು ಮೂರ್ಖರನ್ನಾಗಿಸುವ ಉದ್ದೇಶ ನಮಗಿಲ್ಲ.

ಶ್ರೀ ಜೆ.ಹೆಚ್. ಪಟೇಲ್: ಸಚಿವರು ಬಾಯಿ ತಪ್ಪಿ ಮಾತನಾಡುತ್ತಿದ್ದಾರೆ. ಸದಸ್ಯರನ್ನು ಮೂರ್ಖರನ್ನು ಮಾಡುತ್ತಿಲ್ಲ ಎನ್ನುತ್ತಿದ್ದಾರೆ ಇದು ಸಂಸದೀಯ ಪದವೆ?

ಶ್ರೀ ಅಜೀಜ್‌ಸೇಟ್: ಆ ಬಗ್ಗೆ ಚಿಂತೆ ಬೇಡ. ನಾನು ಸದನಕ್ಕೆ ಮಾಹಿತಿಯನ್ನು ನೀಡಬೇಕಾಗಿದೆ. ವಿದ್ಯುಚ್ಛಕ್ತಿ ಕೊರತೆಯಿಂದಾಗಿ ಕೈಗಾರಿಕೆಗಳು ನಷ್ಟವನ್ನು ತುಂಬಿಸಲು ಪರರಾಜ್ಯಗಳಿಂದ ವಿದ್ಯುಚ್ಛಕ್ತಿ ಪಡೆಯಲಾಗುತ್ತಿದೆ. ಈ ಬಗ್ಗೆ ಮಹಾರಾಷ್ಟ್ರ, ಆಂಧ್ರಪ್ರದೇಶ, ಕೇರಳ ಮತ್ತು ತಮಿಳುನಾಡು ರಾಜ್ಯಗಳನ್ನು ಸಂಪರ್ಕಿಸಿ ವಿದ್ಯುತ್ ಪಡೆಯಲಾಗಿದೆ. ಇದು

ಕೇವಲ ಅಲ್ಪಾವಧಿ ಯೋಜನೆಯಾಗಿದ್ದು ರಾಜ್ಯದ ವಿದ್ಯುಚ್ಛಕ್ತಿ ಪೂರೈಕೆಗೆ ಕಾಳಿ ನದಿಗೆ ಅಡ್ಡಲಾಗಿ ಜಲವಿದ್ಯುತ್ ಕೇಂದ್ರವನ್ನು ಆರಂಭಿಸಲು ಯೋಚಿಸಲಾಗಿದೆ.

ಪ್ರತಿ ಜಿಲ್ಲೆಗಳ ಕೈಗಾರಿಕಾ ಪ್ರಗತಿ ಕುರಿತಂತೆ ಕೈಗಾರಿಕಾ ಇಲಾಖೆಯ ಯೋಜನೆಯೊಂದನ್ನು ಆರಂಭಿಸಿದ್ದು ಈ ಯೋಜನೆಗಳಿಗೆ ಹಣಕಾಸಿನ ಅಗತ್ಯವಿದೆ. ಅದನ್ನು ಪೂರೈಸಲು ಕೇಂದ್ರ ಸರ್ಕಾರದೊಡನೆ ಮಾತುಕತೆ ನಡೆದಿದ್ದು, ಕೇಂದ್ರವು ಇದಕ್ಕೆ ಹಣಕಾಸು ನೆರವು ನೀಡುವುದೆಂದು ಭಾವಿಸಲಾಗಿದೆ. ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಜಿಲ್ಲಾ ಕೈಗಾರಿಕಾ ಇಲಾಖೆಗಳಿಗೆ ನಿರ್ದೇಶನ ನೀಡಲಾಗಿದೆ. ಜಿಲ್ಲಾ ಕೈಗಾರಿಕಾ ಕೇಂದ್ರಗಳನ್ನು ಆರಂಭಿಸಲಾಗಿದ್ದು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಅನುಕೂಲವಾಗುವಂತೆ ವ್ಯವಸ್ಥೆಯನ್ನು ಸುಧಾರಿಸಲಾಗುತ್ತಿದೆ. ಕಚ್ಚಾ ವಸ್ತುಗಳ ಪೂರೈಕೆಗೆ ಅನುವು ಮಾಡಿಕೊಡಲು ಈ ಜಿಲ್ಲಾ ಕೇಂದ್ರಗಳು ಸಹಾಯಕವಾಗುತ್ತಿದ್ದು, ಇದರಿಂದ ಜಿಲ್ಲಾ ಮಟ್ಟದಲ್ಲೆ ಸಣ್ಣ ಮತ್ತು ಗುಡಿ ಕೈಗಾರಿಕೆಗಳ ಸಮಸ್ಯೆ ಬಗೆಹರಿಸಿದಂತಾಗುತ್ತದೆ. ಜಿಲ್ಲಾ ಕೈಗಾರಿಕಾ ಕೇಂದ್ರಗಳು ಸಣ್ಣ ಕೈಗಾರಿಕೆಗಳಿಗೆ ಸಲಹಾ ಮಾಹಿತಿಯನ್ನು ನೀಡಲು ಆರಂಭಿಸಿದ್ದು, ಇದರಲ್ಲಿ ಮಾಹಿತಿ ನೀಡಲು ತಜ್ಞರು ಇರುತ್ತಾರೆ. ವಿವಿಧ ಬ್ಯಾಂಕುಗಳು ಮತ್ತು ಹಣಕಾಸು ನಿಗಮಗಳ ಮುಖಂಡರ ಸಾಲವನ್ನು ನೀಡಲು ವ್ಯವಸ್ಥೆ ಮಾಡಲಾಗಿದೆ. ವಿಜಯನಗರದ ಉಕ್ಕು ಕಾರ್ಖಾನೆಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವನ್ನು ಒತ್ತಾಯಪಡಿಸುತ್ತಿದ್ದು ರಾಜ್ಯದ ವಿದ್ಯುತ್ ಕೊರತೆ ಈ ಕಾರ್ಖಾನೆಯ ಆರಂಭದ ವೇಳೆಗೆ ಸುಧಾರಿಸಬಹುದೆಂದು ಭಾವಿಸಲಾಗಿದೆ.

ನೇಕಾರರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ರಬಕವಿ ಮತ್ತಿತರ ಪ್ರದೇಶದ ನೇಕಾರರ ಸಮಸ್ಯೆಗಳನ್ನು ಬಹುತೇಕ ಕಡಿಮೆ ಮಾಡಲಾಗಿದೆ. ನೇಕಾರರ ಸಮಸ್ಯೆಗಳಿಗೆ ಪರಿಹಾರ ನೀಡಲು ಮತ್ತು ನೇಯ್ದ ಬಟ್ಟೆಗಳನ್ನು ಮಾರಾಟ ಮಾಡಲು ಕರ್ನಾಟಕ ಹ್ಯಾಂಡ್‌ಲೂಮ್ ಡೆವಲಪ್‌ಮೆಂಟ್ ಕಾರ್ಪೋರೇಷನ್‌ನ್ನು ಆರಂಭಿಸಲಾಗಿದೆ. ಇದು 17 ಜಾಗಗಳಲ್ಲಿ ತನ್ನ ಶೋರೂಂ ಹೊಂದಿದ್ದು ಆ ಮುಖಾಂತರ ಬಟ್ಟೆಯನ್ನು ಮಾರಲು ವ್ಯವಸ್ಥೆ ಮಾಡಲಾಗಿದೆ.

ಇನ್ನು ವಕ್ಫ್ ಮಂಡಲಿಗಳ ಬಗ್ಗೆ ಶ್ರೀ ಸಿ.ಎಂ. ಇಬ್ರಾಹಿಂ ಮತ್ತು ಕಮರುಲ್ ಇಸ್ಲಾಂರವರು ಹೇಳಿದಂತೆ ಸರ್ಕಾರ ವಕ್ಫ್ ಮಂಡಲಿಗಳ ಮೇಲೆ ಹೆಚ್ಚಿನ ಹಿಡಿತವನ್ನು ಹೊಂದಿದ್ದು. ಮುತಾವಲಿಗಳು ಸರಿಯಾಗಿ ನಿರ್ವಹಣೆ ಮಾಡದಿದ್ದರೆ ಅದನ್ನು ಸರಿಯಾಗಿ ನಡೆಯುವಂತೆ ಪುನರ್ ವ್ಯವಸ್ಥೆ ಮಾಡಲಾಗುವುದು. ವಕ್ಫ್ ಸಂಸ್ಥೆಗಳ ವೆಚ್ಚ ನಿರ್ವಹಣೆಯ ದೃಷ್ಟಿಯಿಂದ ಕರ್ನಾಟಕ ರಾಜ್ಯ ವಕ್ಫ್ ಅಭಿವೃದ್ಧಿ ನಿಗಮವನ್ನು ಆರಂಭಿಸಲಾಗುವುದು. ಇದರಲ್ಲಿ ಮೂಲ ಧನವನ್ನು ಬ್ಯಾಂಕ್‌ಗಳ ಸಾಲದಿಂದ ವಕ್ಫ್ ಸಂಸ್ಥೆಗಳ ಹಣದಿಂದ ತೊಡಗಿಸಿ ವಕ್ಫ್ ಸಂಸ್ಥೆಗಳ ನಿರ್ವಹಣೆಯನ್ನು ಸಮಗ್ರವಾಗಿ ನಡೆಸಲಾಗುವುದು. ವಕ್ಫ್ ಸಂಸ್ಥೆಗಳ ಪುನರ್ ಸಂದಾಯ ವ್ಯವಸ್ಥೆಯನ್ನು ಗಮನಿಸಿ ಅವುಗಳ ಅಭಿವೃದ್ಧಿಗೆ ಸಾಲ ನೀಡಲಾಗುವುದು. ಇದರಿಂದ ಇನ್ನೂ ಐದರಿಂದ ಹತ್ತು ವರ್ಷಗಳಲ್ಲಿ ನಿಗಮಕ್ಕೆ 5 ಕೋಟಿ ರೂ. ಗಳ ವಾರ್ಷಿಕ ಆದಾಯ ಬರಲಿದೆ.

ಅಧ್ಯಕ್ಷರು: ನಾನು ಬೇಡಿಕೆಯನ್ನು ಸದನದ ಅಂಗೀಕಾರಕ್ಕೆ ಇಡುತ್ತೇನೆ.

ಬೇಡಿಕೆ ನಂ. 5ರನ್ವಯ 1979 ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದಲ್ಲಿ ಕೈಗಾರಿಕೆಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ವೆಚ್ಚ ಮಾಡಲು ರೂ. 34,03,35,000 ರೂಪಾಯಿಗಳ ಅಂದಾಜು ವೆಚ್ಚವನ್ನು ಮಂಜೂರು ಮಾಡಲು ಒಪ್ಪಿಗೆ ಕೋರುತ್ತಿದ್ದೇವೆ. ಈ ಬೇಡಿಕೆ ನಂ. 7 ರನ್ವಯ ಸಣ್ಣ ಕೈಗಾರಿಕೆಗಾಗಿ 31 ಮಾರ್ಚ್ 1979ರ ವಾರ್ಷಿಕ ಅಂದಾಜು ವೆಚ್ಚ ರೂ. 7,98,10,000 ಗಳನ್ನು ನೀಡಲು ಒಪ್ಪಿಗೆ ಕೋರುತ್ತಿದ್ದೇವೆ.

ಬೇಡಿಕೆ ನಂ. 52ರನ್ವಯ ವಕ್ಫ್ ಖಾತೆಗೆ ಸಂಬಂಧಿಸಿದಂತೆ 31 ಮಾರ್ಚ್ 79ರ ವಾರ್ಷಿಕ ಅಂದಾಜು ವೆಚ್ಚ ರೂ. 19,75,000 ಗಳನ್ನು ನೀಡಲು ಒಪ್ಪಿಗೆ ಕೋರುತ್ತಿದ್ದೇವೆ.

ಮಸೂದೆಯು ಅಂಗೀಕರಿಸಲ್ಪಟ್ಟಿತು ಮತ್ತು ಬೇಡಿಕೆಗಳನ್ನು ಅಂಗೀಕರಿಸಲ್ಪಟ್ಟವು.

## ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ (ತಿದ್ದುಪಡಿ) ಮಸೂದೆ-1978.

ಶ್ರೀ ಅಜೀಜ್‌ಸೇಟ್: (ಕೈಗಾರಿಕಾ ಸಚಿವರು):

ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ (ತಿದ್ದುಪಡಿ) ಮಸೂದೆ 1978ನ್ನು ಮಂಡಿಸಲು ಅನುಮತಿ ಕೋರುತ್ತೇನೆ.

ಈ ತಿದ್ದುಪಡಿ ಮಸೂದೆಯು ಬಹಳ ಸರಳವಾದುದು. ಈಗಿರುವ ಕಾಯ್ದೆಯನ್ವಯ ಕೈಗಾರಿಕಾ ಪ್ರದೇಶದಲ್ಲಿ ಅನಧಿಕೃತ ಕಟ್ಟಡ ನಿರ್ಮಾಣವನ್ನು ಕೆಡವಲು ಅವಕಾಶವಿಲ್ಲ. ಕೇವಲ ಅತಿಕ್ರಮಣಕಾರರನ್ನು ಶಿಕ್ಷಿಸಲು ಮಾತ್ರ ಅವಕಾಶವಿದೆ. ಆದರೆ ಇದನ್ನು ಸಕ್ರಮಗೊಳಿಸಲು ಸಾಧ್ಯವಿಲ್ಲದ ಕಾರಣ ಇಂತಹ ಕಾನೂನು ತರುವ ಬಗ್ಗೆ ಈ ಸದನದಲ್ಲಿ ಮಂಡಿಸಲಾಯಿತು.

ಶ್ರೀ ಎ. ಲಕ್ಷ್ಮೀಸಾಗರ್: ಮಾನ್ಯ ಮಂತ್ರಿಗಳು ಈ ಅತಿಕ್ರಮಣದ ಬಗ್ಗೆ ಪೂರ್ಣ ಮಾಹಿತಿ ನೀಡಬೇಕೆಂದು ಕೋರುತ್ತೇನೆ. ಅತಿಕ್ರಮಣ ಯಾವ ಪ್ರದೇಶದಲ್ಲಿ ಆಗಿದೆ. ಅದರ ತೀವ್ರತೆ ಏನು? ಇದರಿಂದ ಎಷ್ಟು ಜನರಿಗೆ ತೊಂದರೆಯಾಗುತ್ತದೆ, ಈ ಬಗ್ಗೆ ಸ್ಪಷ್ಟವಾದ ವರದಿಯನ್ನು ನೀಡಬೇಕಾಗಿ ಕೋರುತ್ತೇನೆ.

ಶ್ರೀ ಎಸ್.ಎಂ. ಶೀರ್ನಾಳಿ ಚಂದ್ರಶೇಖರ್: ತಾವು ಇದರಲ್ಲಿ ನಿರ್ದಿಷ್ಟವಾದ ನೋಟಿಫೈ ಆಗಿದೆಯೇ ಎಂದು ಒಂದು ಪಾಯಿಂಟ್ ಹಾಕಬೇಕು. ಒಂದು ಕನ್‌ಸ್ಟ್ರಕ್ಷನ್ ಆಗಿದ್ದರೆ ಇದು ಅನ್ವಯ ಆಗುತ್ತದೆಯೋ? ನೋಟಿಫಿಕೇಶನ್ ಆಗುವುದಕ್ಕೆ ಮೊದಲೇ ಕನ್‌ಸ್ಟ್ರಕ್ಷನ್ ಮಾಡಿದ್ದರೆ ಅಂಥದನ್ನು ಡಿಮಾಲಿಷ್ ಮಾಡಬೇಕೂಂತ ಹೊರಟರೆ ಅದರಿಂದ ತೊಂದರೆಯಾಗುವುದಿಲ್ಲವೆ? ಅಂಥದ್ದರ ಬಗ್ಗೆ ಏನು ಮಾಡುತ್ತೀರಿ?

ಶ್ರೀ ಅಜೀಜ್‌ಸೇಟ್: ಈ ಕಾಯ್ದೆ ನಿಯಮಗಳು ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಲಿಗೆ ಸೇರಿದ ಜಾಗವನ್ನು ಹೊರತುಪಡಿಸಿ ಬೇರೆ ಜಾಗಕ್ಕೆ ಅನ್ವಯವಾಗುವುದಿಲ್ಲ. ಈ ಸಮಸ್ಯೆ ಕೈಗಾರಿಕೆಗಳಿಗೆ ಜಾಗವನ್ನು ನೀಡಿದ ನಂತರ ಲೇಔಟ್ ನಿರ್ಮಾಣದ ಸಂದರ್ಭದಲ್ಲಿ ಉಂಟಾಗುತ್ತದೆ. ಅನಧಿಕೃತ ಕಟ್ಟಡ ನಿರ್ಮಾಣ ಮಾಡಿದವರಿಗೆ ಶಿಕ್ಷೆಯಿದೆ. ಆದರೆ ಖಾಸಗಿ ಜಾಗದಲ್ಲಿ ಅನಧಿಕೃತ ಕಟ್ಟಡವನ್ನು ಕೆಡವಲು ಸಾಧ್ಯವಿಲ್ಲ. ಕೈಗಾರಿಕಾ ರಕ್ಷಣೆಯ ದೃಷ್ಟಿಯಿಂದ ಈ ತಿದ್ದುಪಡಿಯ ಅವಶ್ಯಕತೆ ಇದೆ.

ಶ್ರೀ ಜೆ.ಹೆಚ್. ಪಟೇಲ್: ಇಲ್ಲಿ ಇದಕ್ಕೆ ತಿದ್ದುಪಡಿ ತರಬೇಕಾದರೆ ಹಿಂದಿರುವ ಕಾನೂನಿನಲ್ಲಿ ತಪ್ಪಿದ್ದರೆ ಅದನ್ನು ಸರಿಪಡಿಸಬೇಕು ಎನ್ನುವ ಉದ್ದೇಶದಿಂದ ತಿದ್ದುಪಡಿ ತರಬೇಕಾಗುತ್ತದೆ. ತಮ್ಮ ಅನುಭವದಲ್ಲಿ ಎಲ್ಲಿ ಇಂಥ ಪ್ರಶ್ನೆ ಉದ್ಭವಿಸಿದೆ ಎಂದು ಹೇಳುತ್ತೀರಾ?

---

ವಿಸನದಿ: 2-8-1978

ಶ್ರೀ ಅಜೀಜ್‌ಸೇಟ್: ನಾವು ಕೈಗಾರಿಕಾ ಉದ್ಯಮಿಗಳಿಂದ ಈ ಬಗ್ಗೆ ಹಲವಾರು ದೂರುಗಳನ್ನು ಪಡೆದಿದ್ದೇವೆ. ಕೈಗಾರಿಕಾ ಪ್ರದೇಶ ಮಂಜೂರಾದ ನಂತರ ನಮಗೆ ಕೇವಲ ದಂಡ ವಿಧಿಸುವ ಹೊರತು ಕಟ್ಟಡ ಕೆಡವಲು ಅಧಿಕಾರವಿಲ್ಲ. ಜನರು ದಂಡ ಕೊಡಲು ಸಿದ್ಧರಾಗಿದ್ದಾರೆ ಹೊರತು ಬಿಡಲು ಸಿದ್ಧರಿಲ್ಲ. ಇದರಿಂದ ಕೈಗಾರಿಕಾ ಪ್ರದೇಶದ ಅಂದಗೆಡುತ್ತಿದೆ.

**ಅಧ್ಯಕ್ಷರು:** ನಾನು ಕೆಳಕಂಡ ತಿದ್ದುಪಡಿಯನ್ನು ಅನುಮೋದನೆಗಾಗಿ ಕೈಗೆತ್ತಿಕೊಳ್ಳುತ್ತಿದ್ದೇನೆ.

ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ (ತಿದ್ದುಪಡಿ) ವಿಧೇಯಕ 1978ನ್ನು ಅನುಮೋದನೆಗೆ ತೆಗೆದುಕೊಂಡಿದೆ.

ಮಸೂದೆ ಅಂಗೀಕೃತವಾಗಿದೆ.

**ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗ (ತಿದ್ದುಪಡಿ) ವಿಧೇಯಕ 1978.**

ಶ್ರೀ **ಅಜೀಜ್‌ಸೇಟ್:** (ಕೈಗಾರಿಕಾ ಮತ್ತು ವಾಣಿಜ್ಯ ಖಾತೆ ಸಚಿವರು) ನಾನು ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗ (ತಿದ್ದುಪಡಿ) ವಿಧೇಯಕ 1978 ಅನ್ನು ಅನುಮೋದನೆಗಾಗಿ ತೆಗದುಕೊಳ್ಳಬೇಕೆಂದು ವಿನಂತಿಸುತ್ತೇನೆ.

ಇದು ಸುಗ್ರೀವಾಜ್ಞೆಯ ಬದಲಿಗೆ ತಂದ ವಿಧೇಯಕ. ವಿಧಾನಸಭೆ ಅಧಿವೇಶನ ಜಾರಿಯಲ್ಲಿಲ್ಲದ ಪ್ರಯುಕ್ತ ಸುಗ್ರೀವಾಜ್ಞೆ ತರಲಾಗಿತ್ತು. ಖಾದಿ ಮತ್ತು ಗ್ರಾಮೋದ್ಯೋಗ ಮಂಡಲಿಯು ತನ್ನ ಲೋಕ ವಸ್ತ್ರ ಘಟಕಗಳಿಗೆ ಹಣ ಹೊಂದಿಸಲು ಸಾಧ್ಯವಾಗದ ಕಾರಣ ರಾಷ್ಟ್ರೀಕೃತ ಬ್ಯಾಂಕುಗಳಿಂದ ಹಣ ತರಲು ಈ ಸುಗ್ರೀವಾಜ್ಞೆ ತರಲಾಗಿತ್ತು.

ಇದರೊಂದಿಗೆ ಮಂಡಲಿಯ ಸದಸ್ಯರ ಸಂಖ್ಯೆಯನ್ನು 15 ರಿಂದ 9ಕ್ಕೆ ಇಳಿಸುವ ಬಗ್ಗೆ ಮತ್ತು ಅಧ್ಯಕ್ಷರು ಮತ್ತು ಸದಸ್ಯರಿಗೆ ಅವರ ಅವಧಿಯ ನಿರ್ದೇಶನದ ಬಗ್ಗೆ ಈ ವಿಧೇಯಕವನ್ನು ತರಲಾಗಿದೆ. ಇದೊಂದು ಸಣ್ಣ ತಿದ್ದುಪಡಿ ಇದನ್ನು ಸದಸ್ಯರು ಅನುಮೋದಿಸಬೇಕು.

ಶ್ರೀ **ಮಳ್ಳೂರು ಆನಂದರಾವ್:** ಅಧ್ಯಕ್ಷರೇ, ಈ ಅಮೆಂಡ್‌ಮೆಂಟ್ ನೋಡಿದರೆ ಇದರಲ್ಲಿ ಏನೂ ಮಹತ್ವವಿಲ್ಲ ಎನ್ನಿಸುತ್ತದೆ. ಆದರೆ ಕೂಲಂಕುಷವಾಗಿ ಒರಿಜಿನಲ್ ಆ್ಯಕ್ಟ್ ಇಟ್ಟುಕೊಂಡು ನೋಡಿದರೆ ಇದನ್ನು ಖಂಡಿತ ವಿರೋಧ ಮಾಡಬೇಕು ಅನ್ನಿಸುತ್ತದೆ. ಇಷ್ಟಕ್ಕೂ ಈ ಖಾದಿ ಹಾಗೂ ಗ್ರಾಮೋದ್ಯೋಗ ಮಂಡಲಿ ಏನಿದೆ? ಇದು ಏತಕ್ಕಾಗಿ? ಯಾವ ದೃಷ್ಟಿಯಿಂದ ನೋಡಿದರೂ ಇದರ ಸಂಪೂರ್ಣ ಅಧಿಕಾರ ಸರಕಾರದ ಬಳಿಯೇ ಇದೆ. ಈಗ ಏನು ಅಮೆಂಡ್‌ಮೆಂಟ್ ತಂದಿದ್ದಾರೆ ಇದರಿಂದ ಪೂರ್ತಿ ಅಧಿಕಾರವನ್ನು ತೆಗೆದುಕೊಳ್ಳುತ್ತಿದ್ದಾರೆ. 15 ಜನರಿಂದ 9 ಜನಕ್ಕೆ ಇಳಿಸಿದ್ದೇವೆ ಎಂದು ಹೇಳಿದ್ದಾರೆ.

ಶ್ರೀ **ಹೆಚ್.ಡಿ ದೇವೇಗೌಡ:** ಇದರಿಂದ 6 ಜನರ ಜೀವನೋಪಾಯಕ್ಕೆ ಪೆಟ್ಟು ಬಿದ್ದಂತಾಗಿದೆ.

ಶ್ರೀ **ಟಿ.ಆರ್. ಶಾಮಣ್ಣ:** ಮಾನ್ಯ ಮಳ್ಳೂರು ಆನಂದರಾಯರು ತಿಳಿಸಿದಂತೆ ಈ ಖಾದಿ ಬೋರ್ಡ್ ಮುಚ್ಚಿದ್ದರೆ ಚೆನ್ನಾಗಿತ್ತೋ ಏನೋ ಎಂದು ನನಗೆ ಅನಿಸುತ್ತದೆ. ಯಾರನ್ನೋ ಒಬ್ಬರನ್ನು ಅಧಿಕಾರಕ್ಕೆ ಕೂರಿಸುವುದಕ್ಕೆ ಈ ರೀತಿ ಮಾಡಿದರೆ ಈ ಬೋರ್ಡ್ ಏತಕ್ಕೆ ಇರಬೇಕು. ಈ ಖಾದಿ ಬೋರ್ಡ್ ಪ್ರಾರಂಭವಾದಾಗ ಇಂಟರೆಸ್ಟ್ ಫ್ರೀ ಲೋನ್‌ನಲ್ಲಿ ನಡೆಯುತ್ತಾ ಇತ್ತು. ನಂತರ 3 ಶೇಕಡಾ ಬಡ್ಡಿ ಕೊಟ್ಟು ನಡೆಸುತ್ತಿದ್ದರು. ಈಗ ನ್ಯಾಷನಲ್ ಬ್ಯಾಂಕಿನಿಂದ 16 ಲಕ್ಷ ರೂಪಾಯಿಗಳನ್ನು ಶೇಕಡ 14 ಬಡ್ಡಿ ಕೊಟ್ಟು ಪಡೆದು ನಡೆಸುತ್ತಿದ್ದಾರೆ. ಇಂಟರೆಸ್ಟ್ ಫ್ರೀ ಲೋನ್ ಕೊಟ್ಟರೂ ಲಾಭವಾಗಲಿಲ್ಲ. ಈಗ ಶೇಕಡ 14 ಬಡ್ಡಿ ಕೊಟ್ಟು ನಡೆಸುತ್ತೇವೆಂದರೆ ಉದ್ಧಾರವಾಗುತ್ತದೆಯೆ? ಯೋಚಿಸಬೇಕು.

---

ವಿಸನದಿ : 1-8-1978

ಶ್ರೀ ಅಜೀಜ್‌ಸೇಟ್: ನಾನು ಸದಸ್ಯರಿಗೆ ಧನ್ಯವಾದ ಹೇಳುತ್ತಿದ್ದೇನೆ. ಮಾನ್ಯ ಸದಸ್ಯರಾದ ಶ್ರೀ ಮಳ್ಳೂರು ಆನಂದರಾಯರು, ಎಂ.ಸಿ. ಬಸಪ್ಪನವರು, ಟಿ.ಆರ್. ಶಾಮಣ್ಣ ಮತ್ತಿತರರು ಕೇಳಿದ ಪ್ರಶ್ನೆಗಳಿಗೆ ಉತ್ತರ ನನ್ನಲ್ಲಿದೆ. ಶ್ರೀ ಜೆ.ಹೆಚ್. ಪಟೇಲರು ನಾನು ಖಾದಿ ಧರಿಸುವುದಿಲ್ಲವೆಂದರು. ಆದರೆ ವೈದ್ಯರು ನನಗೆ ಖಾದಿ ವಸ್ತು ಅಲರ್ಜಿಯೆಂದು ಸರ್ಟಿಫಿಕೇಟ್ ನೀಡಿದ್ದಾರೆ.

ಶ್ರೀ ಸಿ.ಎಂ. ಆರುಮುಗಂ: ವೈದ್ಯರ ಪತ್ರವನ್ನು ಸಚಿವರು ಹಾಜರುಪಡಿಸಲಿ.

ಶ್ರೀ ಅಜೀಜ್‌ಸೇಟ್: ನಾನು ಖಾದಿ ಗ್ರಾಮೋದ್ಯೋಗದಲ್ಲಿ ತುಂಬಾ ಆಸಕ್ತನಾಗಿದ್ದೇನೆ. ಲೋಕವಸ್ತ್ರ ಗ್ರಾಮೋದ್ಯೋಗವಾಗಿದ್ದು ಇದರಿಂದ ನೇಕಾರರಿಗೆ ಸಹಾಯವಾಗಿ ನಿರುದ್ಯೋಗ ನಿವಾರಣೆಯಾಗುತ್ತದೆ. ಈಗ ಲೋಕವಸ್ತ್ರ ಸಂಸ್ಥೆಯಲ್ಲಿ 60 ಜನ ಕೆಲಸಗಾರರಿದ್ದು ಇದೊಂದು ವಿಫಲ ಪ್ರಯೋಗವಲ್ಲ. ಇದರಲ್ಲಿ ತಯಾರಾದ ವಸ್ತುಗಳು ತಕ್ಷಣವೇ ಮಾರಾಟವಾಗುತ್ತಿದೆ. ಖಾದಿ ಬೋರ್ಡಿನ ಸದಸ್ಯರ್‍ಯಾರೂ ನನ್ನ ಸಂಬಂಧಿಕರಲ್ಲ ಮತ್ತು ಸರ್ಕಾರ ಸರ್ಕಾರದಂತೆ ಕಾರ್ಯನಿರ್ವಹಿಸುತ್ತದೆ.

ಶ್ರೀಮತಿ ಎಸ್. ಪ್ರಮೀಳ: ಮಹಿಳಾ ಸದಸ್ಯರನ್ನು ನಾಮಕರಣ ಮಾಡಿದರೆ ಹೇಗೆ?

ಶ್ರೀ ಅಜೀಜ್‌ಸೇಟ್: ಈಗಾಗಲೇ ಈ ದೇಶದಲ್ಲಿ ಮಹಿಳೆಯರಿಗೆ ತುಂಬಾ ಅಧಿಕಾರ ನೀಡಲಾಗಿದೆ. ನನ್ನ ಹೆಂಡತಿ ಕೂಡ ನನ್ನ ಮಾತು ಕೇಳುತ್ತಿಲ್ಲ. ಇಲ್ಲಿ ಮಹಿಳೆಯರಿಗೆ ಮೀಸಲಾತಿ ಬಗ್ಗೆ ಬರುತ್ತಿಲ್ಲ. ಹಾಗೆ ನೋಡಿದರೆ ಅವರಿಗೆ ಶೇಕಡವಾರು ಮೀಸಲಾತಿಯ ಬಗ್ಗೆ ಆಲೋಚಿಸಬೇಕಾಗುತ್ತದೆ. ಮುಂಬರುವ ವರ್ಷಗಳಲ್ಲಿ ಮಹಿಳೆಯರೇ ಇಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ಮುಂದೆ ಬಂದು ನಾವು ಮಹಿಳೆಯರ ಸ್ಥಾನವನ್ನು ಅಲಂಕರಿಸಬೇಕಾಗುತ್ತದೆ.

ಶ್ರೀ ಮಳ್ಳೂರು ಆನಂದರಾವ್: ಇಲ್ಲಿ ಸೆಪರೇಟ್ ಬೋರ್ಡ್ ಏತಕ್ಕೆ ಇಟ್ಟಿದ್ದೀರಿ?

ಶ್ರೀ ಅಜೀಜ್‌ಸೇಟ್: ಇಲ್ಲಿ ಬಿಜಿನೆಸ್ ಮಾಡುವುದಕ್ಕೆ ಬೋರ್ಡ್ ಇದೆ. ಸರ್ಕಾರ ಅದರಲ್ಲಿ ಇಂಟರ್‌ಫಿಯರ್ ಮಾಡುವುದಿಲ್ಲ. ಖಾದಿಗೆ ಸಂಬಂಧಪಟ್ಟ ವ್ಯವಹಾರವನ್ನು ಮೇಂಟೇನ್ ಮಾಡಿ ನಡೆಸುವುದಕ್ಕೆ ಅದನ್ನು ಇಟ್ಟಿದೆ.

ಮಸೂದೆ ಅಂಗೀಕೃತವಾಯಿತು.

**ರಾಜ್ಯದಲ್ಲಿ ಭೂನ್ಯಾಯ ಮಂಡಲಿಯ ಮೇಲ್ಮನವಿ ಪ್ರಾಧಿಕಾರ ರಚನೆ ಮಾಡಿರುವುದರಿಂದ ಗೇಣಿದಾರರಿಗೆ ಉಂಟಾಗುವ ತೊಂದರೆ ಬಗ್ಗೆ ಚರ್ಚೆ.**

ಶ್ರೀ **ರಮಾನಾಥ ರೈ:** ಅಧ್ಯಕ್ಷರೇ ಕರ್ನಾಟಕ ರಾಜ್ಯದಲ್ಲಿ ಭೂನ್ಯಾಯ ಮಂಡಲಿಯ ಮೇಲ್ಮನವಿ ಪ್ರಾಧಿಕಾರವನ್ನು ರಚನೆ ಮಾಡಿರುವುದರಿಂದ ಗೇಣಿದಾರರಿಗೆ ಉಂಟಾಗುವ ಅನ್ಯಾಯದ ಬಗ್ಗೆ ಕಂದಾಯ ಸಚಿವರ ಗಮನ ಸೆಳೆಯುತ್ತೇನೆ.

ಶ್ರೀ **ಅಜೀಜ್‌ಸೇಟ್:** (ಕಂದಾಯ ಸಚಿವರು) ಭೂನ್ಯಾಯ ಮಂಡಲಿಯ ತೀರ್ಪು ಅಂತಿಮವಾಗಿದ್ದರಿಂದ ಭೂಮಾಲೀಕರು ರಾಜ್ಯ ಹೈಕೋರ್ಟಿಗೆ ಅರ್ಜಿ ಸಲ್ಲಿಸಿದ್ದರು. ಇದರಿಂದ ಉಚ್ಚ ನ್ಯಾಯಾಲಯದಲ್ಲಿ ಕೇಸುಗಳು ತುಂಬಿಕೊಂಡಿರುವುದರಿಂದ ಉಚ್ಚ ನ್ಯಾಯಲಯವು ನಿರ್ದೇಶನ ಮಾಡಿ ಇದಕ್ಕೆ ಭೂನ್ಯಾಯ ಮಂಡಲಿಗಳ ತೀರ್ಪಿನ ಪರಿಶೀಲನೆಗೆ ಮೇಲ್ಮನೆ ಪ್ರಾಧಿಕಾರವನ್ನು ರಚಿಸಲು ಸೂಚಿಸಿತು. ಇದರಿಂದ ಪ್ರತಿ ಜಿಲ್ಲಾ ಮಟ್ಟದಲ್ಲೂ ಪ್ರಾಧಿಕಾರವನ್ನು ರಚಿಸಿ ಎರಡು ನ್ಯಾಯಾಧೀಶರನ್ನು ನೇಮಿಸಲು ಸೂಚಿಸಿತು. ಇದರಲ್ಲಿ ಗೇಣಿದಾರರಿಗೆ ಯಾವ ತೊಂದರೆಯೂ ಉಂಟಾಗುವುದಿಲ್ಲ.

ಶ್ರೀ **ವಿನಯಕುಮಾರ್ ಸೊರಕೆ:** ಈ ಭೂನ್ಯಾಯ ಮೇಲ್ಮನವಿ ಪ್ರಾಧಿಕಾರ ಅಪೀಲುಗಳನ್ನು ಬೇಗ ಇತ್ಯರ್ಥ ಮಾಡುವ ಉದ್ದೇಶದಿಂದ ಆರಂಭಿಸಲಾಗಿದೆ. ಭೂ ಸುಧಾರಣಾ ಕಾನೂನನ್ನು ಯಾವ ಉದ್ದೇಶ ಇಟ್ಟುಕೊಂಡು ತರಲಾಗಿತ್ತೋ ಅದರ ವಿರುದ್ಧ ಉದ್ದೇಶದಿಂದ ಈ ಪ್ರಾಧಿಕಾರ ರಚಿಸಲಾಗಿದೆ. ಭೂನ್ಯಾಯ ಮಂಡಲಿಗಳು ಗೇಣಿದಾರರ ಪರವಾಗಿದ್ದರೆ ಪ್ರಾಧಿಕಾರ ಭೂಮಾಲೀಕರ ಪರವಾಗಿ ತೀರ್ಪಿತ್ತಿದೆ.

ಶ್ರೀ **ಅಜೀಜ್‌ಸೇಟ್:** ಈಗ ಇರತಕ್ಕ ವಿಷಯ ಹೇಳಿದ್ದೇನೆ. ಸರ್ಕಾರಕ್ಕೆ ಬಹಳಷ್ಟು ದೂರುಗಳು ಬಂದಿವೆ. ಸಚಿವ ಸಂಪುಟದಲ್ಲಿ ಈ ಬಗ್ಗೆ ಚರ್ಚೆ ಆಗಿದೆ. ಇದರಿಂದ ಇದನ್ನು ಸರಿಪಡಿಸಲು ಪ್ರಯತ್ನಿಸುತ್ತಿದ್ದೇನೆ. ಸ್ವಲ್ಪ ಕಾಲಾವಕಾಶ ಬೇಕಾಗಬಹುದು.

ಶ್ರೀ. **ಎಸ್. ಬಂಗಾರಪ್ಪ:** ಮಾನ್ಯ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಯಾಗಿದ್ದಾಗ ಈ ವಿಚಾರ ಸದನದಲ್ಲಿ ಚರ್ಚೆಗೆ ಬಂದಾಗ ಭೂ ಸುಧಾರಣಾ ಕಾನೂನಿನಲ್ಲಿ ಒಬ್ಬ ವ್ಯಕ್ತಿಗೆ ಹಿಡುವಳಿಯ ಹಕ್ಕನ್ನು ನೀಡಬೇಕಾದರೆ ಪಹಣಿ ಇತ್ಯಾದಿ ದಾಖಲೆಗಳಿರಬೇಕೆಂದು ಮಾಡಲಾಗಿತ್ತು. ಆದರೆ ಗೇಣಿದಾರರು ಅವಿದ್ಯಾವಂತರಾಗಿದ್ದು ಅದರ ದುರುಪಯೋಗವಾಗಬಾರದೆಂದು ಇದನ್ನೆಲ್ಲಾ ನೋಡಿಕೊಂಡು ನಿರ್ಧಾರ ಮಾಡಬೇಕೆಂದು ಅಪಿಲೇಟ್ ಟ್ರಿಬ್ಯೂನಲ್‌ನ್ನು ರಚಿಸಲಾಯಿತು. ಆದರೆ ಈಗ ಈ ಟ್ರಿಬ್ಯೂನಲ್‌ಗಳು ಭೂಮಾಲೀಕರ ಪರವಾಗಿ ತೀರ್ಪು ನೀಡಿ ಗೇಣಿದಾರರಿಗೆ ಅನ್ಯಾಯ ಮಾಡುತ್ತಿವೆ. ಆದ್ದರಿಂದ ಈ ಭೂ ಸುಧಾರಣಾ ಕಾಯಿದೆಯ ಉದ್ದೇಶಕ್ಕೆ ಭಂಗ ಬಂದಿದೆ. ಆದ್ದರಿಂದ ಇದರ ಬಗ್ಗೆ ತಕ್ಷಣ ಕ್ರಮ ತೆಗೆದುಕೊಳ್ಳಬೇಕಾಗಿದೆ.

ಶ್ರೀ ಅಜೀಜ್‌ಸೇಟ್: ಇದೊಂದು ರೆವೆಲ್ಯೂಷನರಿ ಆ್ಯಕ್ಟ್ ಆಗಿದ್ದರೂ ಇದರಿಂದ ರೈತರಿಗೆ ತೊಂದರೆ ಆಗುತ್ತಿದೆ. ಆದ್ದರಿಂದ ಇದನ್ನು ತೆಗೆಯಬೇಕೆಂದು ಹೇಳುತ್ತಿದ್ದಾರೆ. ಆದರೆ ಟ್ರಿಬ್ಯೂನಲ್ ತೆಗೆದು ಹಾಕಿದರೆ ಪುನಃ ಹೈಕೋರ್ಟ್‌ಗೆ ಅಧಿಕಾರ ನೀಡಬೇಕೆ? ನೀಡಿದರೆ ತೀರ್ಪು ನೀಡಲು ಎಷ್ಟು ಸಮಯ ಬೇಕಾಗುತ್ತದೆ. ಯಾರು ತಪ್ಪು ತಿಳಿಯಬೇಡಿ. ಇದನ್ನು ಲಿಟಿಗೇಷನ್‌ಗೆ ಬಿಟ್ಟರೆ ವಾದಿಗೆ ಕಷ್ಟ, ಲಾಯರ್‌ಗೆ ಅದೃಷ್ಟ, ಜಡ್ಜ್ ಅವರ ಇಷ್ಟ ಎಂಬಂತೆ ಆಗುತ್ತದೆ.

ಅಧ್ಯಕ್ಷರು: ಬಹಳ ಪ್ರಾಸಬದ್ಧವಾಗಿ ಹೇಳಿದರು.

ಶ್ರೀ ಅಜೀಜ್‌ಸೇಟ್: ಇಲ್ಲಿ ಹಾವು ಸಾಯಬೇಕು ಆದರೆ ಕೋಲು ಮುರಿಯಬಾರದು. ರೈತರಿಗೆ ಅನುಕೂಲ ಮಾಡಿಕೊಡಬೇಕು ಆದರೆ ಹೈಕೋರ್ಟಿಗೆ ಹೋದರೆ ತೊಂದರೆಯಾಗುತ್ತದೆ. ಟ್ರಿಬ್ಯೂನಲ್‌ಗೆ ಹೋದರೆ ರೈತರಿಗೆ ಅನುಕೂಲವಾಗುತ್ತದೆ. ಆದ್ದರಿಂದ ಟ್ರಿಬ್ಯೂನಲ್ ಸಸ್ಪೆಂಡ್ ಮಾಡುವುದೋ ಎಂಬ ಬಗ್ಗೆ ಇನ್ನೊಂದು ವಾರದಲ್ಲಿ ಪ್ರಯತ್ನ ಮಾಡಿ ನಿರ್ಧರಿಸುತ್ತೇವೆ. ಈ ಬಗ್ಗೆ ಅನಗತ್ಯ ಗೊಂದಲಬೇಡ.

ಶಿವಾನಂದ ಹೆಚ್. ಕೌಜಲಗಿ: ಸಿವಿಲ್ ಕೋರ್ಟಿನಲ್ಲಿ ಕೆಲಸ ಕಡಿಮೆ ಇದೆ ಅವರಿಗೆ ಅಧಿಕಾರ ಕೊಡಿ.

ಶ್ರೀ ಅಜೀಜ್‌ಸೇಟ್: I will consider it.

## 1990-91ನೇ ಸಾಲಿನ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಅನುದಾನ ಬೇಡಿಕೆಗಳ ಮೇಲಿನ ಚರ್ಚೆ

ಶ್ರೀ ಅಜೀಜ್‌ಸೇಟ್: (ಸಚಿವರು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ)

ಮೇಡಂ, ಶ್ರೀ ಏಕಾಂತಯ್ಯನವರು 1987-88ರಲ್ಲಿ ದಾವಣಗೆರೆಯಲ್ಲಿ ನಡೆದ ದಾಳಿಗಳ ಬಗ್ಗೆ ಚರ್ಚಿಸುತ್ತಾ ಚಿತ್ರದುರ್ಗ, ದಾವಣಗೆರೆ, ಚಳ್ಳಕೆರೆ ಮತ್ತು ಹಿರಿಯೂರುಗಳಲ್ಲಿ ನಡೆದ ದಾಳಿಗಳ ಬಗ್ಗೆ ಹೇಳಿ ಅಲ್ಲಿ ಯಾವ ಕ್ರಮವನ್ನು ತೆಗೆದುಕೊಂಡಿಲ್ಲವೆಂದೂ ತಿಳಿಸಿದ್ದಾರೆ. ಚಿತ್ರದುರ್ಗದಲ್ಲಿ 1987-88ರಲ್ಲಿ ಏಳು ದಾಳಿಗಳೂ, ಚಳ್ಳಕೆರೆಯಲ್ಲಿ 11 ರೇಡ್‌ಗಳು, ದಾವಣಗೆರೆಯಲ್ಲಿ 6 ದಾಳಿಗಳು ಮತ್ತು ಹಿರಿಯೂರಿನಲ್ಲಿ 3 ದಾಳಿಗಳೂ ನಡೆದಿವೆ. ಈ ಬಗ್ಗೆ ಮಾರಾಟಗಾರರು ಮತ್ತು ವ್ಯಾಪಾರಸ್ಥರ ವಿರುದ್ಧ ಕೇಸು ದಾಖಲಿಸಿಕೊಳ್ಳಲಾಗಿದೆ.

ಶ್ರೀ ವಾಟಾಳ್ ನಾಗರಾಜ್: ತಾವು ಕನ್ನಡದಲ್ಲಿ ಮಾತನಾಡಿ.

ಶ್ರೀ ಅಜೀಜ್‌ಸೇಟ್: ತಮಗೆ ಕೇಳುವ ಸೌಜನ್ಯವಿಲ್ಲ. ಇಲ್ಲ ಎಂದರೆ ನಾನು ಉತ್ತರವನ್ನೇ ಕೊಡುವುದಿಲ್ಲ. ಈ ತಾಲ್ಲೂಕುಗಳಲ್ಲಿ ಸುಮಾರು 1,36,89,439 ರೂ. ಬೆಲೆಯ ವಸ್ತುಗಳನ್ನು ವಶಪಡಿಸಿಕೊಳ್ಳಲಾಗಿದೆ. ಈ ಮಿಲ್ ಮಾಲೀಕರು ಅಧಿಸೂಚನೆ 6ರನ್ವಯ ಜಿಲ್ಲಾಧಿಕಾರಿಗಳು ಕೇಸು ದಾಖಲ್ಮಾಡಿದ್ದಾರೆ. ಇನ್ನು ಲೆವಿ ಅಕ್ಕಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರ ನೀಡುತ್ತಿರುವ ಅಕ್ಕಿ ಉತ್ತಮ ಗುಣಮಟ್ಟದಲ್ಲಿ ಇಲ್ಲ. ಇದೇ ಕಾರಣದಿಂದ ಇತ್ತೀಚಿನ ಆಹಾರ ಸಚಿವರ ಸಭೆಯಲ್ಲಿ ಈ ಬಗ್ಗೆ ತಿಳಿಸಿದ್ದೇನೆ. ಈಗ ನೀಡುತ್ತಿರುವ ಅಕ್ಕಿಯಲ್ಲಿ ಕಾರ್ಬನ್ ಅಲ್ಲದೆ ಕಲ್ಲಿದ್ದಲು, ಧೂಳು ಮತ್ತೆಲ್ಲಾ ಇದೆ. ಈಗ ನೀಡಿರುವ ಪಡಿತರವನ್ನು ವಿತರಣೆ ಮಾಡಿ ಖಾಲಿ ಮಾಡಿದರೆ ಮಾತ್ರ ಹೊಸ ಪಡಿತರ ನೀಡುತ್ತಾರೆ. ಇಲ್ಲದಿದ್ದರೆ ಇಲ್ಲ. ಇನ್ನು ಹಸಿರುಕಾರ್ಡಿಗೆ ಸಂಬಂಧಿಸಿದಂತೆ ಈಗಾಗಲೇ ರಾಜ್ಯದ 54.75 ಪರ್‌ಸೆಂಟ್ ಜನ ಈ ಯೋಜನೆಯಲ್ಲಿ ಪ್ರಯೋಜನ ಪಡೆದಿದ್ದಾರೆ. 30 ಲಕ್ಷ 75 ಸಾವಿರ ಜನ ಸೇರಿದ್ದು ಅದರಲ್ಲಿ 34,000 ಸಾವಿರ ಅರ್ಹವಲ್ಲವೆಂದು ಪತ್ತೆಯಾಗಿದೆ. 100 ರೂ. 200 ರೂ. ಗಳನ್ನು ನೀಡಿದರೆ ಹಸಿರುಕಾರ್ಡ್ ಸಿಗುತ್ತದೆಯೆಂದು ಹೇಳುತ್ತಾರೆ. ಈ ಬಗ್ಗೆ ನಾನು ಪರಿಶೀಲನೆ ಮಾಡುತ್ತೇನೆ. ನಾನು ನನ್ನ ಸ್ನೇಹಿತರ ಮೂಲಕ 150 ರೂ. ಕಳಿಸಿದೆ ಮತ್ತು ಹಸಿರುಕಾರ್ಡ್ ಲಭಿಸಿತು. ಈಗ ಈ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇನೆ.

ಪಿ.ಜಿ.ಆರ್. ಸಿಂಧ್ಯಾ: ನೀವು ಎಲ್ಲಾ ಹಸಿರು ಕಾರ್ಡ್‌ಗಳನ್ನು ಹಿಂತೆಗೆಯುತ್ತೀರಾ?

ಅಜೀಜ್‌ಸೇಟ್: ನಾವು ಬೇರೆ ಬಣ್ಣದ ಕಾರ್ಡ್ ನೀಡುತ್ತೇವೆ. ಬಡತನದ ರೇಖೆಗೆ ಕೆಳಗಿರುವ ಜನಕ್ಕಾಗಿ ಬೇರೆ ಬಣ್ಣದ ಕಾರ್ಡ್ ನೀಡುವ ಬಗ್ಗೆ ಯೋಚಿಸುತ್ತಿದ್ದೇವೆ ಮತ್ತು ಈ ಬಗ್ಗೆ ಸದ್ಯದಲ್ಲೇ ತೀರ್ಮಾನ ತೆಗೆದುಕೊಳ್ಳುತ್ತೇವೆ. ನನಗೆ ವರ್ಷಗಳಲ್ಲಿ ನಂಬಿಕೆಯಿಲ್ಲ. 2-3 ತಿಂಗಳಲ್ಲಿ ಅಥವಾ 6 ತಿಂಗಳಲ್ಲಿ ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳುತ್ತೇನೆ. ನಾವು

ಈಗಿರುವ ಕಾರ್ಡ್‌ಗಳ ಬದಲಿ ನೀಡಬೇಕಾಗಿದೆ. ಬೇರೆ ದಿನ ನಾನು ಹೇಳಿದಂತೆ ಕಂಟ್ರಾಕ್ಟರ್ ಬಳಿ ಕಾರ್ಡ್ ಇದೆ. ಡ್ರೈವರ್ ಬಳಿ ಇಲ್ಲ. ಊರಿನ ಪ್ರಧಾನರ ಬಳಿ ಕಾರ್ಡ್ ಇದೆ ರೈತರ ಬಳಿ ಇಲ್ಲ. ಇದನ್ನೆಲ್ಲಾ ಸರಿಪಡಿಸಬೇಕಾಗಿದೆ. ಇದನ್ನೆಲ್ಲಾ 6 ತಿಂಗಳಲ್ಲಿ ಮಾಡಲಾಗುವುದು. ನೀವು ನಮ್ಮ ಮತ್ತು ನಮ್ಮ ಇಲಾಖೆಯ ಸಾಮರ್ಥ್ಯವನ್ನು ನೋಡಿ. ಈ ಆಹಾರ ಇಲಾಖೆಗೆ ಸಂಬಂಧಿಸಿದಂತೆ ನಿಮ್ಮ ಸಹಕಾರವನ್ನು ಕೋರುತ್ತೇನೆ. ದಯವಿಟ್ಟು ಇದನ್ನು ರಾಜಕೀಯಗೊಳಿಸಬೇಡಿ. ಇದರಿಂದ ಬಡಜನತೆಗೆ ನಿಜವಾದ ಸಹಾಯವಾಗುತ್ತದೆ. ಆದ್ದರಿಂದ ನಾವು ಪ್ರಾಮಾಣಿಕವಾಗಿ ಪ್ರಯತ್ನಿಸಿ, ಅರ್ಹರಿಗೆ ಇದರ ಪ್ರಯೋಜನ ಲಭಿಸುವಂತೆ ಮತ್ತು ಇದರ ದುರುಪಯೋಗವಾಗದಂತೆ ನೋಡಿಕೊಳ್ಳೋಣ.

ಕೇಂದ್ರ ಸರ್ಕಾರದ ನೀತಿಯಂತೆ ಪ್ರತಿ 2,000 ಜನಸಂಖ್ಯೆಗೆ 500 ಕಾರ್ಡ್‌ಗಳು ಇರುವಂತೆ ಒಂದು ಪಡಿತರ ಅಂಗಡಿಯಿರಬೇಕೆಂದು ಸೂಚನೆಯಿದೆ. ಆದರೆ ಮಲೆನಾಡಿನ ಪ್ರಾಂತದಲ್ಲಿ ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಪ್ರದೇಶದಲ್ಲಿ ಸಂಚಾರಿ ಪಡಿತರ ವಾಹನವನ್ನು ಆರಂಭಿಸುವ ಬಗ್ಗೆ ಯೋಚಿಸಲಾಗುತ್ತಿದೆ. ನನಗೆ ಈ ಇಲಾಖೆಯಲ್ಲಿ ಉತ್ತಮ ಪರಿವರ್ತನೆ ಮಾಡಬೇಕೆಂದು ಆಸೆಯಿದೆ. ನಮ್ಮ ಮನೆ ಕೆಲಸ ಮಾಡುವವನಿಗೆ ರೇಷನ್ ಡಿಪೋದಿಂದ ತಂದ ಅಕ್ಕಿಯನ್ನು ಊಟಕ್ಕೆ ಕೊಡುತ್ತೇನೆ. ನಾವು ಉತ್ತಮ ಅಕ್ಕಿ ಬಳಸುತ್ತೇವೆ. ಈ ವ್ಯತ್ಯಾಸ ಬದಲಾಗಬೇಕು. ಎಲ್ಲರೂ ನನಗೆ ಶಕ್ತಿಕೊಟ್ಟರೆ ಈ ದಿಸೆಯಲ್ಲಿ ಪ್ರಯತ್ನ ಮಾಡುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯಾ: ನೀವು ಏನು ಮಾಡಬೇಕೆಂದು ಯೋಚಿಸಿದ್ದೀರಾ?

ಶ್ರೀ ಅಜೀಜ್‌ಸೇಟ್: ನಾನು ಈ ಬಗ್ಗೆ ಚರ್ಚೆ ಮಾಡುತ್ತಿದ್ದೇನೆ. ನಾವು ನಿಮಗೆ ಈ ಬಗ್ಗೆ ವಿವರವನ್ನು ನೀಡುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯಾ: ಈ ಬಗ್ಗೆ ಸ್ಪಷ್ಟ ಮಾಹಿತಿಬೇಕು. ನನಗೆ 6 ತಿಂಗಳು ಕಾಲಾವಕಾಶಬೇಕು. ಅದು ಬೇಕು ಇದು ಬೇಕು ಎನ್ನುವುದು ಬೇಡ ಈ ಬಗ್ಗೆ ಸ್ಪಷ್ಟವಾದ ಮಾಹಿತಿ ನೀಡಿ.

ಶ್ರೀ ಅಜೀಜ್‌ಸೇಟ್: ನಾನು ಈ ಬಗ್ಗೆ ಮಾಹಿತಿ ನೀಡುತ್ತೇನೆ. ಇಡೀ ಬೆಂಗಳೂರು ನಗರದಲ್ಲಿ ಏಕಗವಾಕ್ಷಿ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ ಯೋಚಿಸುತ್ತಿದ್ದೇನೆ. ಹೀಗೆ ಕ್ರಮ ತೆಗೆದುಕೊಳ್ಳುತ್ತೇನೆ.

ಶ್ರೀ ಹೆಚ್. ಏಕಾಂತಯ್ಯ: ಒಂದು ಹಗರಣವನ್ನು ಮಾನ್ಯ ಮಂತ್ರಿಗಳ ಗಮನಕ್ಕೆ ತಂದಿದ್ದೆ. ಮಾನ್ಯ ಮಂತ್ರಿಗಳು ಹಗರಣದ ಬಗ್ಗೆ ಬೆಳಕು ಚೆಲ್ಲುವುದರ ಬದಲು ಸಂಬಂಧಪಟ್ಟವರನ್ನು ರಕ್ಷಣೆ ಮಾಡುವ ದಾರಿಯಲ್ಲಿ ನಡೆಯುತ್ತಿದ್ದಾರೆ.

ಶ್ರೀ ಅಜೀಜ್‌ಸೇಟ್: ಕಠಿಣವಾದ ಕನ್ನಡ ಮಾತನಾಡುವುದು ಬೇಡ. ನೀವು ಸಾಹಿತ್ಯ ಹೊಡೆಯಬೇಡಿ. ಸಿಂಪಲ್ ಕನ್ನಡದಲ್ಲಿ ಹೇಳಿ.

ಶ್ರೀ ಏಕಾಂತಯ್ಯ: ನಾನು ಚಿತ್ರದುರ್ಗದಲ್ಲಿ ನಡೆದ ದಾಳಿಯ ಬಗ್ಗೆ ಕೇಳಿದೆ.

ಶ್ರೀ ಅಜೀಜ್‌ಸೇಟ್: ಹೇಳಿದೆ ಅದರ ಬಗ್ಗೆ. ಅವರು ಕನ್ನಡದಲ್ಲಿ ಮಾತನಾಡಿದ್ದು ನನಗೆ ಅರ್ಥವಾಗಲಿಲ್ಲ. ನಾನು ಸಿಂಪಲ್ ಇಂಗ್ಲೀಷ್‌ನಲ್ಲಿ ಮಾತನಾಡಿದ್ದು ಅವರಿಗೆ ಅರ್ಥವಾಗಲಿಲ್ಲ.

ಶ್ರೀ ಪಿ.ಜಿ.ಆರ್. ಸಿಂಧ್ಯಾ: ಮೊದಲನೆಯದಾಗಿ ಹಸಿರಕಾರ್ಡ್ ಬಗ್ಗೆ ಬಡವರಿಗೆ ಸಿಕ್ಕಲ್ಲ. ಬಲ್ಲಿದವರಿಗೆ ಸಿಕ್ಕಿದೆ ಎಂದು ಹೇಳಿದ್ದೀರಿ. ತತ್ವದ : ಹಸಿರುಕಾರ್ಡ್ ನೀಡಿಕೆ ಒಳ್ಳೆಯದು ಎಂದು ಎಲ್ಲರಿಗೂ ಹೇಳಿದ್ದಾರೆ. ಆದರೆ ವಿತರಣೆ ಸರಿಯಾಗಿಲ್ಲ ಎಂಬುದನ್ನು ಎಲ್ಲಾ ಪಕ್ಷದವರೂ ಒಪ್ಪುತ್ತಾರೆ. 6 ತಿಂಗಳೊಳಗೆ ಸರಿ ಮಾಡುತ್ತೇನೆಂದು ಹೇಳಿದ್ದೀರ, ಇದನ್ನು ಸರಿ ಮಾಡಿದರೆ ತುಂಬಾ ಕೀರ್ತಿ ನಿಮಗೆ ಬರುತ್ತದೆ. 2 ರೂಪಾಯಿಗೆ ಒಂದು ಕೆ.ಜಿ. ಅಕ್ಕಿ ಬಡವರಿಗೆ ತುಂಬಾ ಅನುಕೂಲವಾಗಿದೆ. ಈಗ ಇದರ ಬೆಲೆ ಹೆಚ್ಚು ಮಾಡಲು ಹೊರಟಿದ್ದೀರಾ. ಬೆಲೆ ಹೆಚ್ಚು ಮಾಡುವುದರಿಂದ ರಾಜ್ಯದ ಬಡಜನತೆಗೆ ತುಂಬಾ ಅನ್ಯಾಯವಾಗುತ್ತದೆ. ಮಾನ್ಯ ಮಂತ್ರಿಗಳು ತುಂಬಾ ಅನುಭವಸ್ಥರಿದ್ದಾರೆ. ಅಜೀಜ್‌ಸೇಟ್ ರಾಜ್ಯ ರಾಜಕೀಯದಲ್ಲಿ ವಿಶಿಷ್ಟ ಸ್ಥಾನದಲ್ಲಿದ್ದಾರೆ. ಬಡವರ ಬಗ್ಗೆ ಅವರಿಗೆ ತುಂಬಾ ಅನುಕಂಪ ಇದೆ. ಆಡಳಿತ ಚೆನ್ನಾಗಿ ತಿಳಿದಿದೆ. ಅವರು 2 ರೂಪಾಯಿಗೆ ಹಸಿರು ಕಾರ್ಡ್ ಮೂಲಕ ಬಡವರಿಗೆ ನೀಡುವ ಅಕ್ಕಿಯನ್ನು ನಿಲ್ಲಿಸಬಾರದೆಂದು ಕೇಳುತ್ತೇನೆ.

ಶ್ರೀ ಅಜೀಜ್‌ಸೇಟ್: ಹಸಿರುಕಾರ್ಡ್ ಮೂಲಕ ವಿತರಣೆ ಮಾಡುವ ಅಕ್ಕಿಯನ್ನು ನಿಲ್ಲಿಸುವ ಹಾಗಿಲ್ಲ. ಏಕೆಂದರೆ, ಅವರಿಗೆ ಗ್ರೀನ್‌ಕಾರ್ಡ್ ಪ್ರಾಮಾಣಿಕವಾಗಿಯೋ ದುರುಪಯೋಗವಾಗಿಯೋ ಹೋಗಿದೆ. ಮಾನವೀಯತೆಯ ಪ್ರಶ್ನೆ ಇಲ್ಲಿದೆ. ನಾವು ನಿಲ್ಲಿಸಿಬಿಟ್ಟರೆ ಅವರು ಏನು ಮಾಡುತ್ತಾರೆ. ಈಗಾಗಲೇ 40 ಕೋಟಿ ಸಬ್ಸಿಡಿ ಕೊಡುತ್ತಿದ್ದೇವೆ.

ಪಿ.ಜಿ.ಆರ್. ಸಿಂಧ್ಯಾ: ಇವತ್ತು ಮಾನ್ಯ ಮಂತ್ರಿಗಳು ಏನು ಉತ್ತರ ನೀಡಿದ್ದಾರೆ ಅದರಿಂದ ನಮಗೆ ಸಮಾಧಾನವಾಗಿಲ್ಲ. ಬಡವರು ತಿನ್ನುವಂತೆ ಅಕ್ಕಿಯ ಬೆಲೆಜಾಸ್ತಿ ಮಾಡಿದ್ದಾರೆ. ಇದು ಬಡವರ ವಿರುದ್ಧ ಕಾರ್ಯವಾಗಿದೆ. ಇದನ್ನು ನಾವು ಪ್ರತಿಭಟಿಸಿ ಸಭಾತ್ಯಾಗ ಮಾಡುತ್ತೇವೆ.

ಶ್ರೀ ಅಜೀಜ್‌ಸೇಟ್: ಇದರಲ್ಲಿ ರಾಜಕೀಯ ಮಾಡಿಲ್ಲ. ಇವರ ಸರ್ಕಾರದವರು 95 ರೂ. ಜಾಸ್ತಿ ಮಾಡಿದ್ದಾರೆ. ನಾವು 45 ಪೈಸೆ ಹೆಚ್ಚಿಸಿದ್ದೇವೆ.

## ರಾಜ್ಯದ ಹೋಟೆಲುಗಳಲ್ಲಿ ತಿಂಡಿ ತಿನಿಸು ಬೆಲೆ ಏರಿಕೆ ಬಗ್ಗೆ ಕಟ್ಟುನಿಟ್ಟಾದ ಕಾರ್ಯಕ್ರಮ

ಬಿ.ಎಂ. ಇದಿನಬ್ಬ: ಬೆಂಗಳೂರು ಮತ್ತು ಮಂಗಳೂರು ಮತ್ತು ಇತರ ಪ್ರಮುಖ ನಗರಗಳಲ್ಲಿ ಹೋಟೆಲುಗಳ ತಿಂಡಿ ತಿನಿಸುಗಳ ಬೆಲೆಯನ್ನು ತಮ್ಮ ಇಚ್ಛಾನುಸಾರ ಏರಿಸುತ್ತಾ ಇದ್ದಾರೆ. ಇದರಿಂದ ಜನಸಾಮಾನ್ಯರಿಗೆ, ಕೂಲಿಕಾರರಿಗೆ ಬಡವರಿಗೆ ತುಂಬಾ ಅನ್ಯಾಯವಾಗಿದೆ. ಸರ್ಕಾರ ಸಕ್ಕರೆ, ಮೈದಾ, ಗೋಧಿ ಇತ್ಯಾದಿಗಳನ್ನು ನಿಯಂತ್ರಿತ ಬೆಲೆಯಲ್ಲಿ ನೀಡುತ್ತಿದ್ದರೂ ಈ ಬೆಲೆಯೇರಿಕೆ ನಡೆದಿದೆ. ಆರೋಗ್ಯದ ದೃಷ್ಟಿಯಿಂದ ಕೂಡ ಹೋಟೆಲ್‌ಗಳಲ್ಲಿ ಸರಿಯಾದ ವ್ಯವಸ್ಥೆ ಇಲ್ಲ. ಇಲ್ಲಿ ಶುಚಿಯ ಬಗ್ಗೆ ಯಾವ ನಿಗಾ ಇಲ್ಲ. ಈ ಬಗ್ಗೆ ಆಹಾರ ಸಚಿವರು ಹೇಳಿಕೆ ನೀಡಬೇಕೆಂದು ಕೋರುತ್ತೇನೆ.

ಶ್ರೀ ಅಜೀಜ್‌ಸೇಟ್: ಸಧ್ಯದ ಪರಿಸ್ಥಿತಿಯಲ್ಲಿ ಯಾವುದೇ ಹೋಟೆಲ್‌ನವರೂ ನಿಯಂತ್ರಿತ ಬೆಲೆಯಲ್ಲಿ ಪದಾರ್ಥಗಳನ್ನು ಪಡೆಯುತ್ತಿಲ್ಲ. ಆದ್ದರಿಂದ ಹೋಟೆಲ್‌ನ ಬೆಲೆ ನಿಯಂತ್ರಣದ ಬಗ್ಗೆ ಯಾವುದೇ ಕ್ರಮ ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಹೋಟೆಲುಗಳು ಶುಚಿತ್ವದ ಬಗ್ಗೆ ಹೇಳುವುದಾದರೆ, ಅದು ಸ್ಥಳೀಯ ಆಡಳಿತಗಳ ವ್ಯಾಪ್ತಿಗೆ ಬರುತ್ತದೆ. ಆರೋಗ್ಯ ಇಲಾಖೆ ಮತ್ತು ಸ್ಥಳೀಯ ಆಡಳಿತಗಳು ಈ ಬಗ್ಗೆ ಕ್ರಮ ತೆಗೆದುಕೊಂಡು ಶುಚಿತ್ವದ ಬಗ್ಗೆ ಗಮನ ಹರಿಸಲು ಸರ್ಕಾರ ಸೂಚಿಸುತ್ತದೆ.

---

ವಿಸನದಿ: 8-6-1990

ಗ್ರಾಮಾಂತರ ಪ್ರದೇಶದ ಜನರಿಗೆ ಹಸಿರು ಕಾರ್ಡ್ ವಿತರಣೆ ವಿಳಂಬ ಹಾಗೂ ಪಡಿತರ ಅವ್ಯವಸ್ಥೆಯಿಂದ ತೊಂದರೆಯಾಗಿರುವುದು.

ಶ್ರೀಮತಿ ಮೋಟಮ್ಮ: ಗ್ರಾಮಾಂತರ ಪ್ರದೇಶದ ಸಾಮಾನ್ಯ ಜನರಿಗೆ ಹಸಿರು ಕಾರ್ಡು ವಿತರಣೆಯಲ್ಲಿ ವಿಳಂಬ ಹಾಗೂ ಪಡಿತರ ಅವ್ಯವಸ್ಥೆಯಿಂದ ಆಗಿರುವ ತೊಂದರೆ ಬಗ್ಗೆ ಆಹಾರ ಮತ್ತು ನಾಗರೀಕ ಸರಬರಾಜು ಮಂತ್ರಿಗಳ ಗಮನ ಸೆಳೆಯುತ್ತೇನೆ.

ಶ್ರೀ ಅಜೀಜ್‌ಸೇಟ್: (ಆಹಾರ ಮತ್ತು ನಾಗರೀಕರ ಸರಬರಾಜು ಸಚಿವರು)

ನಾನು ಕೆಳಕಂಡ ಮಾಹಿತಿ ನೀಡಲು ಇಚ್ಛಿಸುತ್ತೇನೆ. ಗ್ರಾಮೀಣ ಪ್ರದೇಶ ಬಡಜನರಿಗೆ ವಿತರಣೆ ಮಾಡುವ ಪಡಿತರಕ್ಕೆ ಸಹಾಯಧನ ನೀಡುವ ಕಾರ್ಯಕ್ರಮ ತಾ: 1.11.1985ರಿಂದ ಜಾರಿಗೆ ಬಂದಿತು. ವಾರ್ಷಿಕ 3,500-00ಕ್ಕಿಂತ ಕಡಿಮೆ ವರಮಾನವುಳ್ಳ ಕೆಳಕಂಡ ವರ್ಗಗಳು ಅದರಲ್ಲಿ ಸೇರ್ಪಡೆಯಾಯಿತು.

1. ಜಮೀನು ರಹಿತ ಕೂಲಿ ಕಾರ್ಮಿಕರು, ಪ್ಲಾಂಟೇಶನ್ ಕಾರ್ಮಿಕರು.
2. ಸರ್ಕಾರಿ ಸಹಾಯಧನ ವಿಶ್ರಾಂತಿ ವೇತನ, ವೃದ್ಧಾಪ್ಯವೇತನ, ಅಂಗವಿಕಲವೇತನ, ವಿಧವಾ ವೇತನ ಪಡೆಯುವ ಜನರು;
3. ಸಣ್ಣ ಮತ್ತು ಅತಿ ಸಣ್ಣ ರೈತರು.
4. ಕಲ್ಲು ಕುಟ್ಟುವವರು ಇತ್ಯಾದಿ ಬಡ ಕಾರ್ಮಿಕರು.

ಮೊದಲು 24 ಲಕ್ಷ ಕುಟುಂಬಗಳನ್ನು ಗುರುತಿಸಲಾಯಿತು. ನಂತರ ನಡೆಸಿದ ನಿರೀಕ್ಷೆಯಿಂದ ಇನ್ನು 67 ಲಕ್ಷ ಕುಟುಂಬಗಳನ್ನು ಗುರುತಿಸಲಾಗಿದೆ. 1989ರಲ್ಲಿ 20,000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಪ್ರದೇಶವನ್ನು ಈ ಯೋಜನೆಯ ವ್ಯಾಪ್ತಿಗೆ ಸೇರಿಸಲಾಗಿದೆ. ಒಟ್ಟು 31.67 ಲಕ್ಷ ಹಸಿರುಕಾರ್ಡ್ ವಿತರಣೆ ಮಾಡಲಾಗಿದೆ. ಆಹಾರ ಧಾನ್ಯಗಳ ವಿತರಣೆ ಜವಾಬ್ದಾರಿಯನ್ನು ಜಿಲ್ಲಾ ಪಂಚಾಯತ್‌ಗೆ ನೀಡಲಾಗಿದೆ. ಸರ್ಕಾರಕ್ಕೆ ಸಹಾಯಧನ ಮತ್ತು ಸಾಗಣೆಗಾಗಿ ಪ್ರತಿವರ್ಷ 42 ಕೋಟಿಗಳ ಖರ್ಚು ಬರುತ್ತಿದೆ. ಬಡತನದ ರೇಖೆಗಿಂತ ಕೆಳಗಿರುವ ಜನಸಂಖ್ಯೆಯು ಅಂದಾಜು ಶೇಕಡಾ 40ರಷ್ಟಿದೆ ಮತ್ತು ಈಗ ಹಸಿರುಕಾರ್ಡ್ ನೀಡಲಾದ ಜನಸಂಖ್ಯೆ 55.17 ಪರ್‌ಸೆಂಟ್ ಹಾಗಾಗಿ ಇನ್ನು ಮುಂದೆ ಹಸಿರುಕಾರ್ಡ್ ನೀಡಿಕೆಯನ್ನು ಸ್ಥಗಿತಗೊಳಿಸಲಾಗುವುದು. ಈಗ ನಕಲಿ ಕಾರ್ಡುದಾರರ ಪತ್ತೆಗೆ ಕ್ರಮ ತೆಗೆದುಕೊಳ್ಳಲಾಗುವುದು. ಆದ್ದರಿಂದ ಬೋಗಸ್ ಕಾರ್ಡ್ ಪತ್ತೆಯೊಂದಿಗೆ ಅರ್ಹರಿಗೆ ಹಸಿರು ಕಾರ್ಡ್ ನೀಡಿಕೆಯ ಕೆಲಸ ಕೂಡ ನಡೆಯುತ್ತದೆ. ಪಡಿತರ ದುರುಪಯೋಗ ಮಾಡಿಕೊಳ್ಳುವ ಅಂಗಡಿಗಳ ಬಗ್ಗೆ ಕ್ರಮ ತೆಗೆದುಕೊಳ್ಳಲು ಜಿಲ್ಲಾ ಪರಿಷತ್‌ಗೆ ಅಧಿಕಾರ ನೀಡಲಾಗಿದೆ.

ಸಾರಿಗೆ ಇಲಾಖೆಯ ಬೇಡಿಕೆ ಮೇಲಿನ ಚರ್ಚೆ

**ಉಪಾಧ್ಯಕ್ಷರು:** I would request the Hon'ble Minister for Transport to commence his reply.

**ಶ್ರೀ ಅಜೀಜ್‌ಸೇಟ್:** ವಿರೋಧಪಕ್ಷದ ಬೆಂಚುಗಳು ಖಾಲಿಯಾಗಿರುವುದು ಕಂಡಾಗ ವಿಷಾದವೆನಿಸುತ್ತದೆ. ಕ.ರಾ.ರ.ಸಾ.ಸಂ. ಬಗ್ಗೆ ಹಲವು ವಿಚಾರಗಳು ಈ ಚರ್ಚೆಯಲ್ಲಿ ಬರಬಹುದು ಎಂಬ ನಂಬಿಕೆಯಿತ್ತು. ಆದರೆ ಕೆಲವು ಸದಸ್ಯರು ಈ ಬಗ್ಗೆ ತಿಳಿಸಿದ್ದಾರೆ.

ಮೇಡಂ ಕೆ.ಎಸ್ಸಾರ್ಟಿಸಿಯಲ್ಲಿ ಎಲ್ಲವೂ ಸರಿಯಾಗಿಲ್ಲವೆಂಬ ಮಾತನ್ನು ನಾನು ಒಪ್ಪುತ್ತೇನೆ. ನಾವು ಕೆಎಸ್ಸಾರ್ಟಿಸಿಯಲ್ಲಿ ನಷ್ಟ ಕಡಿಮೆಯಾಗಿ ಲಾಭದತ್ತ ನಡೆಯಲು ಪ್ರಯತ್ನ ನಡೆಸುತ್ತಿದ್ದೇವೆ. ಬೇರೆ ರಾಜ್ಯದಲ್ಲಿ ನಮಗಿಂತ ಉತ್ತಮ ಸಾರಿಗೆ ವ್ಯವಸ್ಥೆಯಿದೆ. ನಮ್ಮ ಸದಸ್ಯರು ಈ ರೀತಿ ಹೇಳಿದರು. ಅದನ್ನು ನಾನು ಒಪ್ಪುವುದಿಲ್ಲ. ನಮ್ಮದು ದೇಶದಲ್ಲೇ ಮೂರನೇ ಅತಿದೊಡ್ಡ ಸಾರಿಗೆ ವ್ಯವಸ್ಥೆ. ಇದರಲ್ಲಿನ ನಷ್ಟಕ್ಕೆ ಕಾರಣವೆಂದರೆ, 1) ಅಶಿಸ್ತು. 2) ಕಾರ್ಮಿಕರ ಕಾರ್ಯವಿಫಲತೆ. ಸ್ವಾತಂತ್ರ್ಯ ಬಂದ 44 ವರ್ಷಗಳಲ್ಲಿ ನಾವು ಕೇವಲ ಶೆ. 71 ಮಾರ್ಗವನ್ನು ರಾಷ್ಟ್ರೀಕರಣಗೊಳಿಸಿದ್ದೇವೆ. ಕೆಲವು ವಿಭಾಗಗಳನ್ನು ಪೂರ್ಣ, ಕೆಲವನ್ನು ಭಾಗಶಃ ರಾಷ್ಟ್ರೀಕರಣಗೊಳಿಸಿದೆ ಮತ್ತು ಪ್ರಯಾಣಿಕರ ದೂರು ಪ್ರತಿ ಬಾರಿಗೂ ಹೆಚ್ಚುತ್ತಿದೆ. ಸಾರಿಗೆ ಸಚಿವರಾಗಿ ಒಂದು ಕಡೆ ಸಂಸ್ಥೆಯ ಜವಾಬ್ದಾರಿ ಮತ್ತೊಂದೆಡೆ ಪ್ರಯಾಣಿಕರ ನೋವುಗಳಿಗೆ ಪರಿಹಾರ ನೀಡುವ ವ್ಯವಸ್ಥೆ ಇದರ ಮಧ್ಯ ಗೊಂದಲದಲ್ಲಿದ್ದೇನೆ. ಹಾಗಿದ್ದು, ನಾವು ಪ್ರತಿ ಲೀಟರ್ ಕಿ.ಮಿ. ಉಳಿತಾಯ ಮಾಡಿದ್ದೇವೆ ಮತ್ತು ಅಪಘಾತಗಳು ಕಡಿಮೆಯಾಗಿದೆ. ನಮ್ಮಲ್ಲಿ ಬಸ್‌ಗಳು ಸಾಕಷ್ಟಿವೆ. ಕಂಡಕ್ಟರ್ ಮತ್ತು ಚಾಲಕರಲ್ಲದೇ ಬಸ್‌ಗಳ ಸಂಖ್ಯೆ ಜಾಸ್ತಿಯಾಗುತ್ತಲೆ ಇದೆ. ಮೂರು ಬಾರಿ ಕಂಡಕ್ಟರ್ ಮತ್ತು ಚಾಲಕರ ನೇಮಕಾತಿ ಸ್ಥಗಿತಗೊಂಡಿದೆ. ಮುಂದಿನ ತಿಂಗಳಿನಿಂದ ನೇಮಕಾತಿ ನಡೆಯಬಹುದು. ಇನ್ನು ಕಿಮ್ಕೊ ಖರೀದಿಸುವ ಬಗ್ಗೆ ಹನುಮೇಗೌಡರ ಪ್ರಶ್ನೆಗೆ ಕೆಎಸ್ಸಾರ್ಟಿಸಿ ಈಗಾಗಲೇ ನಷ್ಟದಲ್ಲಿದೆ. ಹಾಗಾಗಿ ಅದನ್ನು ಖರೀದಿಸಲು ಆಗುವುದಿಲ್ಲ. ಕೆಎಸ್ಸಾರ್ಟಿಸಿಯಲ್ಲಿ ಸರಿತೂಗಿಸುವ ರೀತಿಯಿಂದ ನಾವು ವಿಭಾಗಗಳ ಸಂಖ್ಯೆಯನ್ನು 15ರಿಂದ 19ಕ್ಕೆ ಏರಿಸಿದ್ದೇವೆ. ಸಣ್ಣ ವಿಭಾಗದಿಂದ ಉತ್ತಮ ಕೆಲಸ ಸಾಧ್ಯ. ಹೊಸ ನೀತಿಯನ್ನು ರೂಪಿಸುವ ದಿಸೆಯಲ್ಲಿ ನಾವು ಬೇರೆ ರಾಜ್ಯಗಳಿಂದ ವಿಶೇಷವಾಗಿ ತಮಿಳುನಾಡಿನಿಂದ ಸಾರಿಗೆ ನೀತಿಯ ಬಗ್ಗೆ ಮಾಹಿತಿ ಪಡೆಯುತ್ತಿದ್ದೇವೆ. ಸಾಮಾನ್ಯವಾಗಿ ಮದ್ರಾಸ್‌ನಲ್ಲಿ ಸಾರಿಗೆ ವ್ಯವಸ್ಥೆ ಚೆನ್ನಾಗಿದೆಯೆಂದು ಹೇಳುತ್ತಾರೆ. ಆದರೆ ಒಳಗಿರುವ ವಿಚಾರವೇ ಬೇರೆ. ಕೆಎಸ್ಸಾರ್ಟಿಸಿಯು 72 ಕೋಟಿ ಬೆಲೆಯ ಪಾಸುಗಳನ್ನು ನೀಡಿದೆ. ತಮಿಳುನಾಡು ಕೂಡ ರಿಯಾಯತಿ ನೀಡಿದೆ. ಆದರೆ ಶೇ. 80 ಸಹಾಯಧನ ನೀಡಿದೆ.

---

ವಿಸನದಿ : 25-3-1992

ಶ್ರೀ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಯಾಗಿದ್ದಾಗ 72 ಕೋಟಿಗಳ ರಿಯಾಯತಿ ನೀಡಿದರು ಮತ್ತು ಒಂದು ಪೈಸೆಯನ್ನು ಸಹಾಯಧನ ನೀಡಲಿಲ್ಲ. ತೆರಿಗೆಗೆ ಸಂಬಂಧಿಸಿದಂತೆ ತಮಿಳುನಾಡು ಶೇ 6 ರಿಂದ ಶೇ. 10 ಸಂಗ್ರಹಿಸುತ್ತಿದ್ದರೆ, ಕೆಎಸ್ಸಾರ್ಟಿಸಿ ಶೇ. 17 ತೆರಿಗೆ ನೀಡುತ್ತಿದೆ. ಇದು ನಮ್ಮಿಂದ ಮಾಡಿದ್ದಲ್ಲ. ಶ್ರೀ ಪಿ.ಜಿ.ಆರ್. ಸಿಂಧ್ಯಾ ಮಾಡಿದ್ದು ಇದನ್ನು ಕಡಿಮೆ ಮಾಡೋಣವೆಂದರೆ ಮತ್ತೆ ಆರ್ಥಿಕ ಸಮಸ್ಯೆ ತಲೆದೋರುತ್ತದೆ. ಒಂದು ಕಡೆ ಕಾವೇರಿ ಮತ್ತೊಂದೆಡೆ ಕೃಷ್ಣಾ ಯೋಜನೆ ಪೂರ್ಣಗೊಳಿಸಬೇಕಾಗಿದೆ. ಆದ್ದರಿಂದ ಹಣಕಾಸು ವ್ಯವಸ್ಥೆ ಮಾಡುವುದು ಕಷ್ಟವಾಗುತ್ತಿದೆ. ಆದ್ದರಿಂದ ನಮ್ಮ ಸಂಸ್ಥೆ ನಷ್ಟಹೊಂದುತ್ತಿದ್ದು, ಈ ವರ್ಷ ಅದರ ಪ್ರಮಾಣ 35 ಕೋಟಿಗಳಾಗಿವೆ. ಬೆಲೆ ಏರಿಕೆಗೆ ಸಂಬಂಧಿಸಿದಂತೆ 1985-1992ಕ್ಕೆ ಸಂಬಂಧಿಸಿದಂತೆ ನಿರ್ವಹಣಾ ವೆಚ್ಚ ಏರಿಕೆ. ಬೆಲೆ ಇದ್ದಲ್ಲೇ ಇದೆ. ವೀರೇಂದ್ರ ಪಾಟೀಲರು ಮುಖ್ಯಮಂತ್ರಿಯಾದಾಗ 26.5 ಪರ್‌ಸೆಂಟ್ ಶೇಕಡಾ ಬೆಲೆ ಏರಿಕೆಯಾಯಿತು. ಹದಿನೈದು ದಿನಗಳಲ್ಲಿ ಶೇ. 25 ಗಲ್ಫ್ ಸರ್‌ಚಾರ್ಜು ಹೇರಿಕೆಯಾಗಿ ಬೆಲೆ ಏರಿಕೆ ಪ್ರಮಾಣ ಕೇವಲ 15 ಪರ್‌ಸೆಂಟ್ ಆಯಿತು. ಆದಾದ ನಂತರ ಪೆಟ್ರೋಲಿಯಂ, ಟೈರು ಟ್ಯೂಬುಗಳ ಬೆಲೆಯೇರಿಕೆಯಾಯಿತು. ಮತ್ತೊಂದು ವಿಚಾರ ವಿದ್ಯಾರ್ಥಿ ರಿಯಾಯಿತಿ ಪಾಸುಗಳಿಗೆ ಸಂಬಂಧಿಸಿದಂತೆ ಇದೆ. ಕೆಎಸ್ಸಾರ್ಟಿಸಿ ನಷ್ಟ ಅನುಭವಿಸುತ್ತಿರುವ ಈ ಸಂದರ್ಭದಲ್ಲಿ ವಿದ್ಯಾರ್ಥಿ ಪಾಸುಗಳು ಭಾರಿ ನಷ್ಟ ಮಾಡುತ್ತಿವೆ. ಸ್ಥಳೀಯವಾಗಿ ಶೈಕ್ಷಣಿಕ ವ್ಯವಸ್ಥೆಯಿದ್ದರೂ ನಗರ ಪ್ರದೇಶಕ್ಕೆ ಓದಲು ಬರುತ್ತಾರೆ. ಇದರಿಂದ ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ದಿನದಿನ ಕಡಿಮೆಯಾಗುತ್ತಿದೆ. ಕಾನ್ವೆಂಟ್‌ಗಳಲ್ಲಿ ಹೆಚ್ಚಿನ ಡೊನೇಷನ್ ಸ್ವೀಕರಿಸುತ್ತಾರೆ. ಹಾಗಿದ್ದೂ, ಕೆಎಸ್ಸಾರ್ಟಿಸಿ ಪಾಸು ನೀಡಬೇಕೆಂದು ಒತ್ತಾಯಿಸುತ್ತಾರೆ. ನಾವು ಈ ವ್ಯವಸ್ಥೆಯ ಸುಧಾರಣೆಗೆ ಹಲವಾರು ಕ್ರಮಗಳನ್ನು ಕೈಗೊಂಡಿದ್ದೇವೆ. ಹಿರಿಯ ನಾಗರೀಕರ ಪಾಸುಗಳನ್ನು ರದ್ದುಪಡಿಸಲಾಗಿದೆ. ಒಟ್ಟು ಜನಸಂಖ್ಯೆಯಲ್ಲಿ ಒಂದು ಕೋಟಿಗೂ ಹೆಚ್ಚು ಜನ 60 ವಯಸ್ಸು ಮೀರಿದವರಿದ್ದಾರೆ. ನಾವು 50 ಸಾವಿರ ಪಾಸುಗಳನ್ನು ನೀಡಿದ್ದೇವೆ. ಇದರಿಂದ 2 ರಿಂದ 3 ಕೋಟಿ ನಷ್ಟವಾಗುತ್ತಿದೆ. ಅದರಂತೆ ಹೋಮ್‌ಗಾರ್ಡ್‌ಗಳು ಅವರಿಗೆ ಉಚಿತ ಪಾಸುಗಳಿವೆ. ವಿದ್ಯಾರ್ಥಿಗಳು ಬಸ್ಸಿನಲ್ಲಿ ನುಗ್ಗಿ ಜನರ ಸೀಟುಗಳ ಮೇಲೆ ಪುಸ್ತಕವಿರಿಸುತ್ತಾರೆ. ಇದರಿಂದ ನಿಜವಾದ ಪ್ರಯಾಣಿಕರಿಗೂ ತೊಂದರೆಯಾಗುತ್ತದೆ. ಅಷ್ಟೇ ಅಲ್ಲ ಮಹಿಳಾ ಮೀಸಲಾತಿ ಸೀಟುಗಳನ್ನು ಬಿಡುವುದಿಲ್ಲ. ಇದರಿಂದ ತುಂಬಾ ತೊಂದರೆಯಾಗುತ್ತಿದೆ.

ಇನ್ನು ಸದಾ ನಿದ್ರಿಸುವ ವಕ್ಫ್ ಖಾತೆಗೆ ಸಂಬಂಧಿಸಿದಂತೆ ಈ ಮೊದಲು ಕರ್ನಾಟಕ ವಕ್ಫ್ ಮಂಡಲಿಗೆ ದೇಶದಲ್ಲಿ ಉತ್ತಮ ಹೆಸರಿದೆ. ಗೌರವವಿದೆ. ಇತರೆ ರಾಜ್ಯಗಳಿಂದ ಇದರ ಕಾರ್ಯವೈಖರಿ ನೋಡಲು ಬರುತ್ತಿದ್ದರು. ನಾವು ಎರಡು ಕೋಟಿ ಹಣವನ್ನು ವಕ್ಫ್ ಮಂಡಲಿಗೆ ನೀಡುತ್ತಿದ್ದೆವು. ಈಗ ಇದರ ಸರಿಯಾದ ನಿರ್ವಹಣೆಗೆಂದು ಕರ್ನಾಟಕ ವಕ್ಫ್

ಕೌನ್ಸಿಲ್‌ನ್ನು ನೇಮಿಸಲಾಗಿದೆ. ಕಳೆದ ಮೂರು ವರ್ಷದಲ್ಲಿ ಶೇ. 70 ನಷ್ಟು ವಕ್ಫ್ ಹಣ ದುರುಪಯೋಗವಾಗಿದೆ.

ಕೆಎಸ್‌ಆರ್‌ಟಿಸಿ ವಿಭಜನೆಗೆ ಸಂಬಂಧಿಸಿದಂತೆ ತಜ್ಞರ ಸಮಿತಿ ನೇಮಿಸಲಾಗಿದೆ. ಇದೊಂದು ರಾಜಕೀಯೇತರ ಸಮಿತಿ. ಈ ತಜ್ಞರು ವರದಿಯನ್ನು ಮುಂದಿನ ತಿಂಗಳು ನೀಡುವ ವಿಚಾರವಿದೆ. ಅನಂತರ ಈ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇವೆ. ಇಲ್ಲಿಯ ನೌಕರರು ಇದರ ಉತ್ತಮ ಭವಿಷ್ಯದ ಬಗ್ಗೆ ಚಿಂತಿಸಬೇಕು. ಇದರಿಂದ ಅವರಿಗೆ ಉಪಯೋಗವಿದೆ. ಸಂಸ್ಥೆಯ ಸಿಬ್ಬಂದಿಗಳಿಗಾಗಿ ನಾವು 425 ಹಾಸಿಗೆಗಳ ಆಸ್ಪತ್ರೆಯನ್ನು ಆರಂಭಿಸಿದ್ದೇವೆ. ಬೆಂಗಳೂರು, ಹುಬ್ಬಳ್ಳಿ, ಗುಲ್ಬರ್ಗಾ ಮತ್ತು ಬಿಜಾಪುರದಲ್ಲಿ ಇದನ್ನು ತೆರೆಯಲಾಗಿದೆ. ಎಲ್ಲಾ ವಿಭಾಗ ಮಟ್ಟದಲ್ಲೂ ವೈದ್ಯಕೀಯ ಡಿಸ್ಪೆನ್ಸರಿಯನ್ನು ಆರಂಭಿಸಲಾಗಿದೆ. ಈ ಎಲ್ಲಾ ಕಾರ್ಯಗಳ ಮುಖಾಂತರ ಅಧ್ಯಕ್ಷರ ಮೂಲಕ ನಮ್ಮ ಎಲ್ಲಾ ಸದಸ್ಯರಿಗೂ ಈ ಸಂಸ್ಥೆಯ ಚೇತನಕ್ಕೆ ಸರ್ವ ಪ್ರಯತ್ನ ಮಾಡಲಾಗುವುದು ಎಂಬುದನ್ನು ತಿಳಿಸಲು ಇಚ್ಛಿಸುತ್ತೇನೆ. ನಮ್ಮ ಖಾತೆಯ ಬೇಡಿಕೆಗಳಾದ ಬೇಡಿಕೆ ಸಂಖ್ಯೆ 25,28,24 ಮತ್ತು 52ನ್ನು ಮಂಜೂರು ಮಾಡಬೇಕೆಂದು ಕೋರುತ್ತೇನೆ.

ಶ್ರೀ ಎ.ಬಿ. ಜಕನೂರು: ನಾನು ಸಾರಿಗೆ ಸಚಿವರಿಂದ ಕೆಎಸ್ಸಾರ್ಟಿಸಿಗೆ ಬಸ್‌ನಲ್ಲಿ ಟಾಪ್ ಮೇಲೆ ಕುಳಿತು ಪ್ರಯಾಣಿಸಲು ಅವಕಾಶವಿದೆಯೆ? ಎಂದು ತಿಳಿಯಲು ಯತ್ನಿಸುತ್ತೇನೆ. ಹಾಗಿದ್ದರೆ ಅದನ್ನೇಕೆ ನಿಲ್ಲಿಸಲಿಲ್ಲ.

ಶ್ರೀ ಅಜೀಜ್‌ಸೇಟ್: ಸಚಿವರಾಗಿ ನಾನು ನನ್ನ ಖಾತೆಯ ನಿಯಮಗಳ ಬಗ್ಗೆ ಮಾತನಾಡಬಲ್ಲೆ ಆದರೆ ದೈನಂದಿನ ಸಮಸ್ಯೆಗಳಿಗಾಗಿ ಸದಸ್ಯರು ಕೆಎಸ್ಸಾರ್ಟಿಸಿ ಅಧಿಕಾರಿಗಳನ್ನು ಸಂಪರ್ಕಿಸಬೇಕೆಂದು ಕೋರುತ್ತೇನೆ. ಟಾಪ್ ಮೇಲೆ ಪ್ರಯಾಣ ಒಂದು ಪಾಲಿಸಿ ವಿಚಾರ. ನಾನು ಅದನ್ನು ಒಪ್ಪಬೇಕಾಗುತ್ತದೆ. ಕಾರಣ ನಾವು ಬಸ್‌ಗಳು ಮತ್ತು ಸಿಬ್ಬಂದಿಯ ಕೊರತೆ ಅನುಭವಿಸುತ್ತಿದ್ದೇವೆ.

ಶ್ರೀ ಹೆಚ್. ವಿಶ್ವನಾಥ್: ಇದುವರೆಗೆ ರಸ್ತೆ ರಾಷ್ಟ್ರೀಕರಣ ನಿಮ್ಮ ನೀತಿ ಆಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಮಾನ್ಯ ಸಚಿವರು ರಸ್ತೆ ಸಾರಿಗೆಯನ್ನು ಖಾಸಗೀಕರಣ ಮಾಡುವ ಬಗ್ಗೆ ಹೇಳುವುದನ್ನು ಕೇಳಿದ್ದೇನೆ. ಇದಕ್ಕೆ ವಿರುದ್ಧವಾಗಿ ಸಾರಿಗೆ ಸಂಸ್ಥೆ ಅಧ್ಯಕ್ಷರು ನಾವು ಖಾಸಗೀಕರಣ ಮಾಡುವುದಿಲ್ಲವೆಂದು ಹೇಳಿದ್ದಾರೆ. ಇದರ ಬಗ್ಗೆ ನಿಮ್ಮ ಸರ್ಕಾರದ ಸ್ಪಷ್ಟ ನೀತಿ ನಿಲುವು ತಿಳಿಸಿ.

ಶ್ರೀ ಅಜೀಜ್‌ಸೇಟ್: ನಾನು ಮೊದಲೇ ಹೇಳಿದೆ. ಹಾಗೆ ಹೇಳಿದರೆ ಚಿಕ್ಕಪುಟ್ಟ ಕಂಪ್ಲೇಂಟ್ ಎಲ್ಲಾ ಇದೆ. ಅದನ್ನು ಸರಿಪಡಿಸುತ್ತೇವೆ. ಶ್ರೀ ವಿಶ್ವನಾಥರವರು ಸಚಿವರು ಮತ್ತು ಅಧ್ಯಕ್ಷರಲ್ಲಿ ಭಿನ್ನಾಭಿಪ್ರಾಯವಿದೆಯೆಂದು ತಿಳಿಸಿದ್ದಾರೆ. ಅದು ಹಾಗೆ ಅಲ್ಲ. ನಾನು

ಆ ಜಾಗದಲ್ಲಿ ಛೇರ್ಮನ್ ಆಗಿದ್ದರೂ ನಾನು ಮಾಡುವುದಿಲ್ಲ ಎಂದೇ ಹೇಳುತ್ತಿದ್ದೆ. ಏಕೆಂದರೆ ಛೇರ್ಮನ್ ಆ ಸಂಸ್ಥೆಯಲ್ಲಿರುತ್ತಾರೆ. ಈಗ ನಾನು ಆ ಸಂಸ್ಥೆಯಲ್ಲ. ಸಚಿವರಾಗಿ ನನಗೆ ಕೆಎಸ್ಸಾರ್ಟಿಸಿ ಒಂದು ದೊಡ್ಡ ಆಪರೇಟರ್ ಅಷ್ಟೇ. ಒಬ್ಬ 20 ಬಸ್ ಇಟ್ಟಿರಬಹುದು ಇನ್ನೊಬ್ಬ 100 ಬಸ್ ಇಟ್ಟಿರಬಹುದು. ಈ ಸಂಸ್ಥೆಯಲ್ಲಿ 2,000 ಬಸ್ ಇರಬಹುದು. ನಾವು ಜನರ ಅವಶ್ಯಕತೆ ಮತ್ತು ಅನುಕೂಲವನ್ನು ಗಮನಿಸಬೇಕಾಗುತ್ತದೆ. ಅವರ ಬಗ್ಗೆ ಗಮನ ನೀಡಬೇಕು. ದೇವರಾಜ್ ಅವರು ಛೇರ್ಮನ್ ಅವರು ಸಂಸ್ಥೆಯ ಬಗ್ಗೆ ಹೇಳಬೇಕು. ಇದರಲ್ಲಿ ಭಿನ್ನಾಭಿಪ್ರಾಯ ಇದೆ ಎಂದರೆ ತಪ್ಪಾಗುತ್ತದೆ.

## ಪ್ರಶ್ನೋತ್ತರಗಳು

### ಕಾರ್ಮಿಕ ಖಾತೆ ಸಚಿವರಾಗಿ ಆಡಳಿತಾತ್ಮಕ ಕ್ರಮಗಳ ಬಗ್ಗೆ ಉತ್ತರ ನೀಡುತ್ತಾ

### ತಾಲ್ಲೂಕು ಮಟ್ಟದಲ್ಲಿ ಉದ್ಯೋಗ ವಿನಿಮಯ ಕೇಂದ್ರ ಆರಂಭಿಸುವ ಬಗ್ಗೆ

ಪ್ರಶ್ನೆ: ಶ್ರೀ ಹೆಚ್.ಎಸ್.ಸಿದ್ದಪ್ಪ(ಅರಸೀಕೆರೆ) ಮಾನ್ಯ ಕಾರ್ಮಿಕ ಸಚಿವರು ಈ ಪ್ರಶ್ನೆಗೆ ಉತ್ತರಿಸುವರೇ? ಈಗ ಜಿಲ್ಲಾ ಮಟ್ಟದಲ್ಲಿರುವ ಉದ್ಯೋಗ ವಿನಿಮಯ ಕೇಂದ್ರಗಳನ್ನು ತಾಲ್ಲೂಕು ಮಟ್ಟದಲ್ಲಿ ಆರಂಭಿಸುವ ಆಲೋಚನೆ ಇದೆಯೇ?

**ಅಜೀಜ್‌ಸೇಟ್:-** ಇದೆ. ಆದರೆ 25,000ಕ್ಕೂ ಮೀರಿದ ಜನಸಂಖ್ಯೆ ಇರುವ ತಾಲ್ಲೂಕು ಪ್ರದೇಶದಲ್ಲಿ ಮಾತ್ರ ಹಣಕಾಸಿನ ಅವಲಂಬನೆ ಮೇಲೆ ಆರಂಭಿಸುವ ಯೋಜನೆಯಿದೆ.

**ಪ್ರಶ್ನೆ:** ಹೆಚ್.ಎಸ್. ಸಿದ್ಧಪ್ಪ: ಮಾನ್ಯ ಸಚಿವರು ತಮ್ಮ ಉತ್ತರದಲ್ಲಿ 25,000ಕ್ಕೂ ಮೀರಿದ ಜನಸಂಖ್ಯೆ ಇರುವ ಪ್ರದೇಶದಲ್ಲಿ ವಿನಿಮಯ ಕೇಂದ್ರ ಆರಂಭಿಸಲಾಗುವುದು ಎಂದರು. ಈಗ ಜನಸಂಖ್ಯೆಯ ಗಣತಿಯ ಪ್ರಕಾರ ಎಲ್ಲಾ ತಾಲ್ಲೂಕುಗಳಲ್ಲೂ 25,000ಕ್ಕೂ ಹೆಚ್ಚು ಜನ ಸಂಖ್ಯೆಯಿಂದೆ. ಆದ್ದರಿಂದ ಮಾನ್ಯ ಮಂತ್ರಿಗಳು ಇದು ಯಾವಾಗ ಕಾರ್ಯಾರಂಭ ಮಾಡುವುದೆಂದು ತಿಳಿಸುವಿರಾ?

**ಅಜಿಜ್‌ಸೇಟ್:** (ಕಾರ್ಮಿಕ ಖಾತೆ ಸಚಿವರು) ಇದು ರಾಜ್ಯದ ಹಣಕಾಸು ಸ್ಥಿತಿಯನ್ನು ಅವಲಂಬಿಸಿದೆ.

ಶ್ರೀ **ಕಾಗೋಡು ತಿಮ್ಮಪ್ಪ:** ಈಗಾಗಲೇ ಹಾಲಿ ಎಷ್ಟು ವಿನಿಮಯ ಕೇಂದ್ರಗಳಿವೆ ಎಂದು ತಿಳಿಸುವಿರಾ?

ಶ್ರೀ **ಅಜೀಜ್‌ಸೇಟ್ (ಕಾರ್ಮಿಕ ಸಚಿವರು):-** 19 ವಿನಿಮಯ ಕೇಂದ್ರಗಳಿವೆ. ಅಂಗವಿಕಲರಿಗೆ ವಿಶೇಷ ಉದ್ಯೋಗ ವಿನಿಮಯ ಕೇಂದ್ರವಿದೆ ಮತ್ತು ತಾಂತ್ರಿಕ ವಿನಿಮಯ ಕೇಂದ್ರವಿದೆ. ಇದರೊಂದಿಗೆ ನೂತನವಾಗಿ ಕೆ.ಜಿ.ಎಫ್. ನಲ್ಲಿ ವಿನಿಮಯ ಕೇಂದ್ರವನ್ನು ಆರಂಭಿಸಲಾಗಿದೆ. ವಿಜಯನಗರ ಉಕ್ಕು ಕಾರ್ಖಾನೆ ಸ್ಥಾಪನೆಯ ಹಿನ್ನೆಲೆಯಲ್ಲಿ ಹೊಸಪೇಟೆಯಲ್ಲಿ ಒಂದು ಉದ್ಯೋಗ ವಿನಿಮಯ ಕೇಂದ್ರ ಆರಂಭಿಸಲಾಗಿದೆ.

ಪ್ರಶ್ನೆ: ಶ್ರೀ ಡಿ.ಬಿ. ಕಲ್ಮಣಕರ್:- ಈ ಯೋಜನೆಯಿಂದ ಪ್ರಯೋಜನ ಪಡೆಯುವ ತಾಲ್ಲೂಕು ಕೇಂದ್ರಗಳು ಯಾವುದು ಎಂಬ ಬಗ್ಗೆ ವಿವರ ನೀಡಬಹುದೇ?

ಪ್ರಶ್ನೆ: ಎಂ.ಎಚ್. ಜಯಪ್ರಕಾಶ್‌ನಾರಾಯಣ್: ಮಾನ್ಯ ಮಂತ್ರಿಗಳು ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಸಿರ್ಸಿ ಪಟ್ಟಣದಲ್ಲಿ ಜಿಲ್ಲಾ ಕೇಂದ್ರ ಹಾಗೂ ಎಲ್ಲಾ ಕಛೇರಿಗಳಿಗೂ ಇವೆ. ಇಲ್ಲಿ ಎಂಪ್ಲಾಯ್‌ಮೆಂಟ್ ಎಕ್ಸ್‌ಛೇಂಜ್ ನೀಡುವಿರಾ?

ಅಜೀಜ್‌ಸೇಟ್: ನಾನು ಪರಿಶೀಲಿಸುತ್ತೇನೆ. ಈಗ ಭದ್ರಾವತಿ ಮತ್ತು ದಾವಣಗೆರೆ ಪ್ರಸ್ತಾಪದಲ್ಲಿದೆ. ಸಿರ್ಸಿಯ ಬಗ್ಗೆ ಪರಿಶೀಲಿಸುತ್ತೇನೆ.

ಎಂ.ಎಸ್. ಕೃಷ್ಣನ್: ಬೆಂಗಳೂರಿನಲ್ಲಿ ಎಂಪ್ಲಾಯ್‌ಮೆಂಟ್ ಎಕ್ಸ್‌ಛೇಂಜ್‌ನಲ್ಲಿ ತುಂಬಾ ನೂಕು ನುಗ್ಗಲು ಇದೆ, ಆದ್ದರಿಂದ ಬೆಂಗಳೂರಿನಲ್ಲಿ ಎರಡು ಕಡೆ ಎಂಪ್ಲಾಯ್‌ಮೆಂಟ್ ಕಛೇರಿ ಮಾಡುವಿರಾ?

ಅಜೀಜ್‌ಸೇಟ್: ಇದು ನಮ್ಮ ಪರಿಶೀಲನೆಯಲ್ಲಿದೆ.

## ದಿನಾಂಕ 12-4-1972 ರಂದು ಪ್ರಶ್ನೆಗಳಿಗೆ ಉತ್ತರ ನೀಡುತ್ತಿದ್ದ ಕಾರ್ಮಿಕ ಸಚಿವ ಅಜೀಜ್‌ಸೇಟ್:

## ರಾಜ್ಯದಲ್ಲಿ ನಿರುದ್ಯೋಗ ಕುರಿತ ಚರ್ಚೆ

ಶ್ರೀ ಟಿ.ಆರ್. ಶಾಮಣ್ಣ: ಕಾರ್ಮಿಕ ಸಚಿವರು ಈ ಪ್ರಶ್ನೆಗಳಿಗೆ ಉತ್ತರಿಸುವರೇ?

1. ಕೆಳಕಂಡ ವಿಭಾಗಗಳಲ್ಲಿ ನಿರುದ್ಯೋಗಿಗಳ ಸಂಖ್ಯೆ
   1) ತಾಂತ್ರಿಕ: ಬಿ.ಇ., ಡಿಪ್ಲೊಮಾ, ಮೆಡಿಕಲ್ ಇತ್ಯಾದಿ
   2) ಇತರೇ ಸುಶಿಕ್ಷಿತ ನಿರುದ್ಯೋಗಿಗಳು
   3) ಅಶಿಕ್ಷಿತ ನಿರುದ್ಯೋಗಿಗಳು
2. ಈ ನಿರುದ್ಯೋಗ ನಿವಾರಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು?

ಶ್ರೀ ಅಜೀಜ್ ಸೇಟ್:- ಕಾರ್ಮಿಕ ಸಚಿವರು.

ದಿನಾಂಕ 29-02-1972ರಲ್ಲಿ ಇದ್ದಂತೆ ರಾಜ್ಯದ ಶಿಕ್ಷಿತ ನಿರುದ್ಯೋಗ ಪದವೀಧರರ ಸಂಖ್ಯೆ ಈ ರೀತಿಯಾಗಿದೆ.

| | | |
|---|---|---|
| 1. | ಇಂಜಿನಿಯರಿಂಗ್ ಪದವೀಧರರು | 2,765 |
| 2. | ಡಿಪ್ಲಮೋದಾರರು | 6,585 |
| 3. | ವೈದ್ಯಕೀಯ ಪದವೀಧರರು | 380 |
| 4. | ಕೃಷಿ ಪದವೀಧರರು | 216 |
| 5. | ಪಶುವೈದ್ಯ ಪದವೀಧರರು | 25 |

ಇತರೆ ನಿರುದ್ಯೋಗಿಗಳು 1,43,498. ಇದರಲ್ಲಿ ಶಿಕ್ಷಕ ಅಶಿಕ್ಷಕರ ವಿಭಾಗ ಲಭ್ಯವಿಲ್ಲ. ಆದರೆ ಸರ್ಟಿಫಿಕೇಟ್ ಪಡೆದವರು (ಐ.ಟಿ.ಐ. ಇತ್ಯಾದಿ) 3,665.

ಒಟ್ಟಾರೆ ನಿರುದ್ಯೋಗಿಗಳ ಸಂಖ್ಯೆ: 1,21,113

ನಿರುದ್ಯೋಗ ನಿವಾರಣೆಗೆ ಕೈಗೊಂಡ ಕ್ರಮಗಳು.

ಚಾಲ್ತಿಯಲ್ಲಿರುವ ಯೋಜನೆಗಳು:

1. ಮೈಸೂರು ರಾಜ್ಯ ಸ್ಟೈಫಂಡರಿ ಶಿಕ್ಷಣ ಯೋಜನೆ ಇಂಜಿನಿಯರ್ ಮತ್ತು ಡಿಪ್ಲೊಮಾದಾರರಿಗೆ.

2. ಶಿಕ್ಷಿತ ನಿರುದ್ಯೋಗಿಗಳಿಗೆ ಪೈಲೆಟ್ ಸ್ಕೀಂ ಆಫ್ ಎಂಪ್ಲಾಯ್‌ಮೆಂಟ್
3. ಸ್ವಂತ ಉದ್ಯೋಗಕ್ಕೆ ಭತ್ಯೆ ಇತ್ಯಾದಿ
4. ಕಸ್ಟಮ್ ಸರ್ವಿಸ್ ಯೂನಿಟ್‌ಗಳ ಸ್ಥಾಪನೆ
5. ಟ್ರಾಕ್ಟರ್ ಮತ್ತು ಫಾರ್ಮ್ ಮೆಷಿನರಿಯಲ್ಲಿ ಸೂಪರ್‌ವೈಸರ್ ಟ್ರೈನಿಂಗ್
6. ಉದ್ಯೋಗ ನಿರ್ವಹಣೆಗೆ ಕಡಿಮೆ ಅವಧಿ ಭತ್ಯೆ
7. ಅಂಗವಿಕಲರಿಗೆ ತಾಂತ್ರಿಕ ತರಬೇತಿ.
8. ನಾನ್ ಸ್ಟೈಫೆಂಡರಿ ಸ್ಕೀಂ ಫಾರ್ ಇಂಜಿನಿಯರ್ಸ್.

ಮಂಜೂರಾದ ಇನ್ನೂ ಚಾಲ್ತಿಗೆ ಬಾರದ ಯೋಜನೆಗಳು:

1. ಇಂಜಿನಿಯರ್ ಉದ್ಯೋಗಿಗಳಿಗೆ ಕಾರು ಮತ್ತು ಆಟೋರಿಕ್ಷಾ ನೀಡಿದೆ.
2. ಕೃಷಿ ಪದವೀಧರರಿಗೆ ಜಮೀನು ವಿಸ್ತರಣೆ ಯೋಜನೆ.
3. ಇಂಜಿನಿಯರಿಂಗ್ ಉದ್ಯೋಗಿಗಳಿಂದ ಕಾರು, ಆಟೋರಿಕ್ಷಾ, ಸ್ಕೂಟರ್ ರಿಪೇರಿಗೆ ಸಹಕಾರ ಕ್ಷೇತ್ರದಲ್ಲಿ ವರ್ಕ್‌ಷಾಪ್ ನೀಡಿಕೆ.

ಶ್ರೀ ಟಿ.ಆರ್. ಶಾಮಣ್ಣ: ಉದ್ಯೋಗ ವಿನಿಮಯ ಕೇಂದ್ರದಲ್ಲಿ ಹೆಸರು ರಿಜಿಸ್ಟರ್ ಮಾಡಿಕೊಂಡು ಐದಾರು ವರ್ಷಗಳಾದರೂ ಅಂತಹವರಿಗೆ ಕೆಲಸ ಸಿಗದೆ ಒದ್ದಾಡುತ್ತಿದ್ದಾರೆ. ಇವರ ಬಗ್ಗೆ ಸರ್ಕಾರ ಯಾವ ಕಾರ್ಯಕ್ರಮ ತೆಗೆದುಕೊಂಡಿದೆ?

ಶ್ರೀ ಅಜೀಜ್‌ಸೇಟ್: ಎರಡು ಲಕ್ಷಕ್ಕಿಂತ ಜಾಸ್ತಿ ಜನ ರಿಜಿಸ್ಟರ್ ಮಾಡಿಸಿರಬಹುದು. ಆದರೆ ಎಂಪ್ಲಾಯ್‌ಮೆಂಟ್ ಎಕ್ಸ್‌ಛೇಂಜ್‌ಗಳಲ್ಲಿ ಪ್ರಭಾವದಿಂದ ಕೆಲಸಗಳು ಸಿಗುತ್ತಿವೆ ಎನ್ನುವುದನ್ನು ನಾನು ಒಪ್ಪಿಕೊಳ್ಳಲು ತಯಾರಿಲ್ಲ. ಕೆಲಸವಿಲ್ಲದೆ ಇರುವ ಅನ್ ಎಂಪ್ಲಾಯ್ಡ್ ಗ್ರಾಜುಯೇಟ್ಸ್‌ಗೆ ಸಾಧ್ಯವಾದಷ್ಟು ಅಲ್ಲಲ್ಲಿ ಕೆಲಸಕ್ಕೆ ಸೇರಿಸಲು ಪ್ರಯತ್ನ ನಡೆಯುತ್ತಿದೆ. ಜೊತೆಗೆ ಇನ್ನೂ ಅನೇಕ ಸ್ಕೀಂಗಳನ್ನು ಮಾಡಿದ್ದೇವೆ. ಇದನ್ನು ಕಾರ್ಯಗತ ಮಾಡಲು ತೀವ್ರವಾಗಿ ಯೋಜನೆ ಮಾಡಲಾಗುತ್ತಿದೆ.

ಶ್ರೀ ಎಂ.ಎಸ್. ಕೃಷ್ಣನ್: ಬೇರೆ ರಾಜ್ಯಗಳಲ್ಲಿ ಆಯಾ ರಾಜ್ಯದ ಭಾಷೆಯನ್ನು ಕಲಿತುಕೊಂಡರೆ ಮಾತ್ರ ಅಲ್ಲಿ ಕೆಲಸ ಕೊಡುತ್ತೇವೆಂದು ಹೇಳುತ್ತಾರೆ ಮತ್ತು ಅಲ್ಲಿಯ ಸರ್ಕಾರಗಳು ಅದರಂತೆ ತೀರ್ಮಾನ ತೆಗೆದುಕೊಂಡಿವೆ. ಇದು ನಮ್ಮ ಸರ್ಕಾರದ ಗಮನಕ್ಕೆ ಬಂದಿದೆಯೆ? ರಾಜ್ಯದಲ್ಲೂ ಇರುವ ಕೈಗಾರಿಕೆಗಳಲ್ಲಿ ಇಂತಹ ಒಂದು ಕಾರ್ಯಕ್ರಮವನ್ನು ಜಾರಿಗೆ ತರಲು ಸಾಧ್ಯವೆ?

**Sri Aziz Sait:** I think we have to first consider this question at the national basis because we are all Indian and we shall not have any discrimination among ourselves. It is also true that some of the states are employing persons on language and regional basis. But I assure you that we will also considser it but not a narrow angle as other states have done but we will do it with a little broader view.

ಶ್ರೀ ಕೊಣಂದೂರು ಲಿಂಗಪ್ಪ:- ನಮ್ಮ ಎಂಪ್ಲಾಯ್‌ಮೆಂಟ್ ಎಕ್ಸ್‌ಛೇಂಜ್‌ಗಳಲ್ಲಿ ಹೊರ ರಾಜ್ಯದಿಂದ ಬಂದ ಅಧಿಕಾರಿಗಳಿದ್ದು ಅವರು ನಮ್ಮ ಜನರಿಗೆ ಬಹಳ ಅನ್ಯಾಯ ಮಾಡುತ್ತಿದ್ದಾರೆ. ಕಸ ಗುಡಿಸಲು ಮದ್ರಾಸಿನಿಂದ ಜನರನ್ನು ತಂದು ನೇಮಕ ಮಾಡುತ್ತಿದ್ದಾರೆ. ಇದನ್ನು ತಪ್ಪಿಸಿ ನಮ್ಮ ರಾಜ್ಯದ ಜನತೆಗೆ ಉದ್ಯೋಗ ಸಿಗುವಂತೆ ಏರ್ಪಾಡು ಮಾಡುತ್ತೀರಾ?

**Sri Aziz Sait:** It is a very emotional question. Employment Exchange are there to guide our graduate boys. But I am very sorry to say that our graduate boys don't like to move from districts not even from their taluks to take up jobs. I request hon'ble members to persude our boys to take up some work available under our schemes.

ನಾನು ಈಗಾಗಲೇ ಹೇಳಿದ್ದೇನೆ. ಕಾಲೇಜು, ಪಾಲಿಟೆಕ್ನಿಕ್, ಐ.ಟಿ.ಐ.ಗಳಲ್ಲಿ ಪಾಸಾದೊಡನೆ ಸರ್ಕಾರಿ ಕೆಲಸ ಸಿಗುತ್ತದೆ ಎಂದು ಹೇಳುವ ಮನೋಭಾವ ಹೋಗಬೇಕು. ಈಗ ಕೈಗಾರಿಕಾ ಇಲಾಖೆಯಿಂದ, ವ್ಯವಸಾಯ ಇಲಾಖೆಯಿಂದ, ಲೋಕೋಪಯೋಗಿ ಇಲಾಖೆಯಿಂದ ಏನೇನು ಅನುಕೂಲತೆಗಳು ಸಿಗುತ್ತವೆ ಆ ಅನುಕೂಲತೆಗಳನ್ನು ಪಡೆಯಲು ಮುಂದೆ ಬರಬೇಕು. ಓದಿದವರಿಗೆಲ್ಲಾ ಸರ್ಕಾರಿ ಉದ್ಯೋಗ ಕೊಡಬೇಕೆಂದರೆ ಸಾಧ್ಯವಾಗುವುದಿಲ್ಲ.

ಶ್ರೀ ಹೆಚ್.ಡಿ. ದೇವೇಗೌಡ: ಕೇಂದ್ರ ಸರ್ಕಾರದವರು ಯೂನಿಯನ್ ಪಬ್ಲಿಕ್ ಸರ್ವಿಸ್ ಕಮೀಷನ್ನಿನವರು ಕೆಲಸಕ್ಕೆ ನೇಮಿಸಿಕೊಳ್ಳತಕ್ಕ ಅಭ್ಯರ್ಥಿಗಳ ವಯೋಮಿತಿಯನ್ನು 24 ವರ್ಷದಿಂದ 28 ವರ್ಷಕ್ಕೆ ಮಾಡಿದ್ದಾರೆ. ಈ ದೃಷ್ಟಿಯಿಂದ ರಾಜ್ಯ ಸರ್ಕಾರದವರು ನಮ್ಮ ರಾಜ್ಯದಲ್ಲಿ ಕೆಲಸಕ್ಕೆ ನೇಮಿಸಿಕೊಳ್ಳಲು ವಯೋಮಿತಿಯನ್ನು 28 ರಿಂದ 30 ವರ್ಷಕ್ಕೆ ಮತ್ತು ಹರಿಜನ ಗಿರಿಜನರಿಗೆ 30 ರಿಂದ 35 ವರ್ಷಕ್ಕೆ ಹೆಚ್ಚು ಮಾಡಬಹುದಲ್ಲವೆ?

ಶ್ರೀ ಅಜೀಜ್‌ಸೇಟ್: ನಿಮ್ಮ ಸಲಹೆಯನ್ನು ಪರಿಗಣಿಸಲಾಗುವುದು.

## ದಿನಾಂಕ 28-6-1972 ರ ಪ್ರಶ್ನೋತ್ತರ

ಶ್ರೀ ಹೆಚ್.ಸಿ. ಶ್ರೀಕಂಠಯ್ಯ: ಕಾರ್ಮಿಕ ಸಚಿವರು ಈ ಪ್ರಶ್ನೆಗೆ ಉತ್ತರ ನೀಡುವರೆ? ಇಡೀ ರಾಜ್ಯದಲ್ಲಿ ರಸ್ತೆ ಸಾರಿಗೆಯನ್ನು ರಾಷ್ಟ್ರೀಕರಣಗೊಳಿಸುವ ಕಾರ್ಯಕ್ರಮವಿದೆಯೆ?

ಶ್ರೀ ಅಜೀಜ್‌ಸೇಟ್: ಹೌದು.

ಶ್ರೀ ಹೆಚ್.ಸಿ. ಶ್ರೀಕಂಠಯ್ಯ: ಈ ರಾಷ್ಟ್ರೀಕರಣದ ಪ್ರಕ್ರಿಯೆ ಆರಂಭ ಮಾಡಿ ಎಷ್ಟು ವರ್ಷಗಳಾಯಿತು?

ಶ್ರೀ ಅಜೀಜ್‌ಸೇಟ್: 1957-58 ಪ್ರಾರಂಭವಾಯಿತು.

ಶ್ರೀ ಹೆಚ್.ಸಿ. ಶ್ರೀಕಂಠಯ್ಯ: ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ರಾಷ್ಟ್ರೀಕರಣವನ್ನು ಮಾಡುವುದಕ್ಕೆ ಕಾರಣಗಳೇನು?

ಶ್ರೀ ಅಜೀಜ್‌ಸೇಟ್: ರಾಜ್ಯದ ಅನೇಕ ಜಿಲ್ಲೆಗಳಲ್ಲಿ ರಾಷ್ಟ್ರೀಕರಣ ಮಾಡಿದ್ದೇವೆ. ಇನ್ನೂ ಅನೇಕ ಪಾಕೆಟ್‌ಗಳನ್ನು ರಾಷ್ಟ್ರೀಕರಣ ಮಾಡಬೇಕೆಂದಿದ್ದೇವೆ. As you know the whole difficulty is about the chassis and funds. when the chassis and funds are available nationalisation will be taken up.

The M.S.R.T.C has prepared a draft scheme in respect of Koppal pockets in Raichur District. The scheme contains 120 routes and it is under consideration of the Government. The corporation is also contemplating to take up interstate routes between Mysore-Andhra-Mysore-Kerala and Mysore-Tamilnadu.

ರಾಜ್ಯದ ಶೇಕಡ 31 ಭಾಗ ಇನ್ನೂ ರಾಷ್ಟ್ರೀಕರಣವಾಗಬೇಕಿದೆ. ಮೈಸೂರು, ತುಮಕೂರು, ಚಿತ್ರದುರ್ಗ, ಕೊಡಗು, ಶಿವಮೊಗ್ಗ, ಮಂಡ್ಯ ಮತ್ತು ಬೀದರ್ ಜಿಲ್ಲೆಗಳು ಈಗ ಕಾರ್ಯಗತವಾಗುತ್ತಿವೆ. The eastern sectors of Mysore and Kolar Districts and northern sector of Chitradurga districts are still operated by private operators.

ಶ್ರೀ ಶ್ರೀಕಂಠಯ್ಯ ಹೆಚ್.ಸಿ: ರಾಷ್ಟ್ರೀಕರಣ ಮಾಡತಕ್ಕ ಕಾರ್ಯ 1957-58 ರಿಂದ ಆರಂಭವಾಗಿದೆಯೆಂದು ತಿಳಿಸಿದಿರಿ. ಅಲ್ಲಿಂದ 15 ವರ್ಷಗಳಿಂದಲೂ Chassis ತೊಂದರೆ ಇದೆಯೆ?

**Sri Aziz Sait:** In Mysore State, the problems of chassis are there. But this undertaking is having only mercedes. Dodge can be taken up in substitute for this. Dodge is comparitevely economic. If Govt. of India approves of this dodge. we can go for Dodge for this undertaking.

## ಚಾಮುಂಡಿ ಬೆಟ್ಟದ ಹತ್ತಿರ ನೆಹರೂಲೋಕ ನಿರ್ಮಾಣ.

ಶ್ರೀ ಹೆಚ್.ಪುಟ್ಟದಾಸ (ಸಾತನೂರು): ಕಾರ್ಮಿಕ ಸಚಿವರು ಉತ್ತರಿಸುವರೆ?

1. ಮೈಸೂರಿನ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿ ನೆಹರೂಲೋಕ ನಿರ್ಮಾಣದ ಪ್ರಸ್ತಾಪನೆ ಇದೆಯೇ?

2. ಹೌದಾದರೆ ಇದಕ್ಕೆ ಆರ್ಥಿಕ ನೆರವು ಎಲ್ಲಿಂದ?

3. ಈ ಯೋಜನೆಯ ಉದ್ದೇಶಿತ ಅಂದಾಜು ವೆಚ್ಚ ಎಷ್ಟು?

4. ಯೋಜನೆಯ ಕಾಮಗಾರಿಗೆ ಹಿಡಿಯುವ ಸಮಯವೆಷ್ಟು?

ಶ್ರೀ ಅಜೀಜ್‌ಸೇಟ್:

a) The Government is examining the possibility of the reviving the Nehru Loka Scheme in a miniature and modified manner.

b) This has not been decided.

c) This is to be worked out.

d) No time limit is fixed at this state.

ಶ್ರೀ ಅಜೀಜ್‌ಸೇಟ್: ಮೈಸೂರು ನಗರದ ಸುತ್ತಮುತ್ತ ಅನೇಕ ಪ್ರಕೃತಿ ಸೌಂದರ್ಯದ ಸ್ಥಳಗಳಿವೆ. ಆದಕಾರಣ ಚಾಮುಂಡಿ ಬೆಟ್ಟದ ಬಳಿ ಡಿಸ್ನಿಲ್ಯಾಂಡ್ ಮಾದರಿಯ ನೆಹರೂ ಲೋಕ ಸ್ಥಾಪಿಸುವ ಬಗ್ಗೆ ಸಮಿತಿ ಮಾಡಬೇಕೆಂದಿದ್ದೇವೆ. ಇದು ಭಾರತೀಯ ಸಂಸ್ಕೃತಿಯ ಮಾದರಿಯಲ್ಲಿದ್ದು, ಮ್ಯೂಸಿಯಂ, ಪಾರ್ಕ್, ಜೂ ಒಳಗೊಂಡಿರುತ್ತದೆ.

## 14ನೇ ಡಿಸೆಂಬರ್ 1972 ರಂದು ನಡೆದ ಚರ್ಚೆ, ವಿಷಯ ಕಾರ್ಮಿಕ ಸಂಘಟನೆಗಳ ಅಧಿಕೃತ ಮಾನ್ಯತೆ ಬಗ್ಗೆ.

ಶ್ರೀ ಎಂ.ಎಸ್. ಕೃಷ್ಣನ್: ತಾವು ಕಾರ್ಮಿಕ ಸಂಘನೆಗಳ ನೋಂದಣಿಯ ಬಗ್ಗೆ ಗಲಾಟೆ ಉಂಟಾಗುತ್ತಿದೆಯೆ ಎಂಬ ಪ್ರಶ್ನೆಗೆ ಇಲ್ಲ ಎಂದು ಉತ್ತರಿಸಿದ್ದೀರಿ. ಆದರೆ ಮೊನ್ನೆ ನಡೆದಂತಹ ಹೆಚ್.ಎಂ.ಟಿ ಕಾರ್ಖಾನೆಯಲ್ಲಿ ವಿವಾದ ಬಂದಿಲ್ಲವೆ? ಎಂ.ಇ.ಐ.ನಲ್ಲಿ 6-8 ತಿಂಗಳ ಹಿಂದೆ ವಿವಾದ ಬರಲಿಲ್ಲವೆ? ಎನ್.ಜಿ.ಇ.ಎಫ್ ನಲ್ಲಿ ವಿವಾದ ಇರಲಿಲ್ಲವೆ? ನೀವು ಕೊಟ್ಟ ವಿವರಣೆಗೂ ಇದಕ್ಕೂ ವಿರೋಧಾಭಾಸವುಂಟಾಗುತ್ತದೆ. ಇದರ ಬಗ್ಗೆ ಮಾಹಿತಿ ಬೇಕು.

ಶ್ರೀ ಅಜೀಜ್‌ಸೇಟ್: ನನ್ನ ಮಟ್ಟಿಗೆ ಹೇಳುವುದಾದರೆ ಅಧಿಕೃತ ನೋಂದಣಿಯ ಸಮಸ್ಯೆಯೇ ಕೈಗಾರಿಕೆಗಳ ಸಮಸ್ಯೆಯಲ್ಲ. ಅದಕ್ಕಿಂತ ಹೆಚ್ಚಾಗಿ ಒಂದಕ್ಕಿಂತ ಹೆಚ್ಚಿರುವ ಕಾರ್ಮಿಕ ಸಂಘಟನೆಗಳ ಪರಸ್ಪರ ವೈಷಮ್ಯ, ವಿವಾದವೇ ಕೈಗಾರಿಕಾ ಗಲಾಟೆಗಳಿಗೆ ಕಾರಣವೆಂಬುವನ್ನು ನೀವು ಒಪ್ಪಬೇಕು. ನೋಂದಣಿಗೆ ಸಂಬಂಧಿಸಿದಂತೆ ರಾಜ್ಯ ನೋಂದಣಿ ಕಛೇರಿಯಲ್ಲಿ ಕೇವಲ ಐದು ಅರ್ಜಿಗಳು ಇದೆ. ಇದರಿಂದ ಕೈಗಾರಿಕಾ ಅಶಾಂತಿಗೆ ಕೇವಲ ನೋಂದಣಿ ಕಾರಣವಲ್ಲವೆಂಬುದು ತಿಳಿಯುತ್ತದೆ.

ಶ್ರೀ ಎಂ.ಎಸ್. ಕೃಷ್ಣನ್: ಈ ವಿಚಾರವನ್ನೇ ಹೇಳಿದ್ದು. ಮಾನ್ಯ ಮಂತ್ರಿಗಳು ನೋಂದಣಿಗೆ ಸಂಬಂಧಿಸಿದಂತೆ 5 ಅರ್ಜಿಗಳು ಇದೆಯೆಂದು ಹೇಳಿದರು ಮತ್ತು ಮೊದಲಿಗೆ ಯಾವುದು ಇಲ್ಲವೆಂದರು. ಈ ವಿರೋಧಾಭಾಸಕ್ಕೆ ಕಾರಣವೇನು?

ಶ್ರೀ ಅಜೀಜ್‌ಸೇಟ್: ಈ ಅರ್ಜಿಗಳು ತೆರನಾದವು. ನಾನು ಯಾವುದನ್ನೂ ಮುಚ್ಚಿಟ್ಟಿಲ್ಲ. ಐದು ಅರ್ಜಿಗಳು ಯಾವುವೆಂದರೆ;

1) ಮೈಸೂರು ಲ್ಯಾಂಪ್ಸ್ ವರ್ಕ್ಸ್ ಅಸೋಸಿಯೇಷನ್: ಇದರ ಅರ್ಜಿ ಪರಿಶೀಲನಾ ಸಮಿತಿ ಮುಂದಿದೆ.

2) ಮೈಸೂರು ವಿದ್ಯುಚ್ಛಕ್ತಿ ಮಂಡಲಿ ಡಿಪ್ಲಮೋದಾರರ ಸಂಘ: ಉಪಕಾರ್ಮಿಕ ಅಧಿಕಾರಿಯವರ ಬಳಿಯಿದೆ.

3) ಮೈಸೂರು ಪವರ್ ಕಾರ್ಪೋರೇಷನ್ ಎಂಪ್ಲಾಯೀಸ್ ಯೂನಿಯನ್: ವರದಿ ಪರಿಶೀಲನೆಯಲ್ಲಿದೆ.

4) ಎ.ಸಿ.ಸಿ. ಲಿಮಿಟೆಡ್ ಎಂಪ್ಲಾಯೀಸ್ ಅಸೋಸಿಯೇಷನ್: ಕಾರ್ಮಿಕ ಆಯುಕ್ತರಿಗೆ ವರದಿಯಾಗಿದೆ.

5) ರ್‍ಯಾಲಿ ಎಂಪ್ಲಾಯೀಸ್ ಲೇಬರ್ ಯೂನಿಯನ್.

ಶ್ರೀ ಕೆ. ಶ್ರೀರಾಮುಲು: ಕಾರ್ಮಿಕ ಸಂಘಗಳಿಗೆ ಮಾನ್ಯತೆ ನೀಡುವಲ್ಲಿ ಬೇರೆ ಮಾನದಂಡ ಅನುಸರಿಸಬೇಕೆಂದು ಹೇಳಿರುವುದರಿಂದ ಕೈಗಾರಿಕಾ ಅಶಾಂತಿ ಉಂಟಾಗಲಿಲ್ಲವೆ?

ಶ್ರೀ ಅಜೀಜ್‌ಸೇಟ್: ಮುಖ್ಯಮಂತ್ರಿಯವರು ತಿಳಿಸಿದಂತೆ ಕೋಡ್ ಆಫ್ ಡಿಸಿಪ್ಲಿನ್ ಪ್ರಕಾರ ಯಾರು ನಡೆಯುತ್ತಾರೋ ಅದರ ಪ್ರಕಾರ ಮಾನ್ಯತೆ ಲಭಿಸುತ್ತದೆ. ಯಾವ ಕಾರ್ಮಿಕ ಸಂಘವಾಗಲೀ ಒಳ್ಳೆಯ ಪ್ರಕಾರದಲ್ಲಿ ನಡೆದರೆ ಅದಕ್ಕೆ ಸರ್ಕಾರದವರು ಮಾನ್ಯತೆ ನೀಡುತ್ತಾರೆ. ಡಿಸಿಪ್ಲಿನ್ ವೈಲೇಷನ್ ಮಾಡಿ ಕಾನೂನು ಕೈಗೆ ತೆಗೆದುಕೊಳ್ಳುವ ಸಂಘಗಳಿಗೆ ಮಾನ್ಯತೆ ನೀಡುವುದಿಲ್ಲ.

## ಎಂ.ಎಸ್. ಆರ್.ಟಿ.ಸಿ. ಸಂಸ್ಥೆಯಲ್ಲಿ ಜಾಹೀರಾತುಗಳ ಬಗ್ಗೆ ದಿನಾಂಕ 1 ಫೆಬ್ರವರಿ 1973 ರಂದು ನಡೆದ ಚರ್ಚೆ.

**ಶ್ರೀ ಕಾಗೋಡು ತಿಮ್ಮಪ್ಪ:** ಮಾನ್ಯ ಸಾರಿಗೆ ಸಚಿವರು ಎಂ.ಎಸ್.ಆರ್.ಟಿ.ಸಿ.ಯಲ್ಲಿ ಜಾಹೀರಾತು ಪ್ರದರ್ಶನದ ಬಗ್ಗೆ ಉತ್ತರ ನೀಡುವಿರಾ?

ಶ್ರೀ ಅಜೀಜ್‌ಸೇಟ್: ನಾನು ಈ ಮಾಹಿತಿಯನ್ನು ನೀಡಲು ಇಚ್ಛಿಸುತ್ತೇನೆ. ಎಂ.ಎಸ್.ಆರ್.ಟಿ.ಸಿ.ಯು ನೇಮಕ ಮಾಡಿದ್ದ ಸಮಿತಿಯು ನೀಡಿದ ಶಿಫಾರಸ್ಸುಗಳನ್ನು ಒಪ್ಪಿಕೊಂಡಿದೆ ಮತ್ತು ಎಂ.ಎಸ್.ಆರ್.ಟಿ.ಸಿ. ಬಸ್‌ಗಳು, ಬಸ್‌ನಿಲ್ದಾಣಗಳು, ಬಸ್‌ಶೆಲ್ಟರ್‌ಗಳು ಮುಂತಾದ ಕಡೆಗಳಲ್ಲಿ ಜಾಹೀರಾತು ಪ್ರದರ್ಶನವನ್ನು ಸಂಸ್ಥೆಯ ವತಿಯಿಂದಲೇ ಪ್ರಾಯೋಗಿಕವಾಗಿ ಒಂದು ವರ್ಷದವರೆಗೆ ಪ್ರದರ್ಶಿಸಬಹುದೆಂದು ಒಪ್ಪಿಕೊಂಡಿದೆ.

ಇದರೊಂದಿಗೆ ಈ ಹಿಂದೆ ಬಸ್‌ನಿಲ್ದಾಣಗಳಲ್ಲಿ ಜಾಹೀರಾತು ಪ್ರದರ್ಶಿಸಿದ ಸಂಸ್ಥೆಗಳನ್ನು ಸಂಪರ್ಕಿಸಲಾಗಿದ್ದು ಈ ಮೂಲಕ ಸುಮಾರು 2,55,095 ರೂ.ಗಳ ವ್ಯಾಪಾರವನ್ನು ನಿರೀಕ್ಷಿಸಲಾಗಿದೆ.

ಇದರೊಂದಿಗೆ ಜಾಹೀರಾತು ಪ್ರದರ್ಶನಕ್ಕೆಂದು ಟೆಂಡರ್‌ಗಳನ್ನು ಕರೆಯಲಾಗಿದೆ ಮತ್ತು ಜಾಹೀರಾತು ರಚನೆಗೆ ಕಲಾವಿದರನ್ನು ಕೂಡ ಆಯ್ಕೆ ಮಾಡಲಾಗಿದೆ. ಚೀಫ್ ಮೆಕ್ಯಾನಿಕಲ್ ಇಂಜಿನಿಯರ್‌ರವರಿಗೆ 800 ಬೋರ್ಡ್‌ಗಳು ಆರಂಭದಲ್ಲಿ ಸಿದ್ಧಪಡಿಸಲು ನಿರ್ದೇಶನ ನೀಡಲಾಗಿತ್ತು. ಬೋರ್ಡ್‌ಗಳು ಬಂದ ತಕ್ಷಣ ಪೈಂಟಿಂಗ್ ಮಾಡಿಸಲಾಗುವುದು. ಸಾರಿಗೆ ಸಂಸ್ಥೆಯೊಂದಿಗೆ ಮೆ: ಎನ್ನಾರ್ ಸಿಂಡಿಕೇಟ್ ಸಂಸ್ಥೆಗಿದ್ದ ಕರಾರು ಮುಕ್ತಾಯಗೊಂಡಿರುವುದರಿಂದ ಡಿ.ಎ.ವಿ.ಪಿ. ಮತ್ತು ಕೇಂದ್ರ ವಾರ್ತಾ ಪ್ರಸಾರ ಖಾತೆಯನ್ನು ಸಂಪರ್ಕಿಸಲಾಗಿದೆ. ನಿರೋಧ್ ಜಾಹಿರಾತಿಗೆ ಸಂಬಂಧಿಸಿದಂತೆ 1 ರಿಂದ 2 ಲಕ್ಷ ರೂಪಾಯಿಗಳ ಜಾಹೀರಾತು ನಿರೀಕ್ಷಣೆಯಲ್ಲಿದ್ದೇವೆ.

ಇದರಂತೆಯೇ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ನಿರ್ದೇಶನಾಲಯದಿಂದ ಕುಟುಂಬ ಕಲ್ಯಾಣ ಜಾಹೀರಾತುಗಳ ಬಗ್ಗೆ ನಿರೀಕ್ಷಣೆಯಲ್ಲಿದ್ದು ಇದರಿಂದ 3 ರಿಂದ 4 ಲಕ್ಷದವರೆಗೆ ಹಣ ಗಳಿಸುವಯೋಜನೆಯಲ್ಲಿದೆ. ಈ ತಿಂಗಳು ಕೊನೆಯೊಳಗೆ ನಮ್ಮ ಎಲ್ಲಾ ಕರಾರುಗಳನ್ನು ಪೂರೈಸಲಾಗುವುದು ಮತ್ತು 1973-1974ರಲ್ಲಿ ಸುಮಾರು 5 ಲಕ್ಷ ರೂಪಾಯಿಗಳ ಲಾಭ ಗಳಿಸುವ ನಿರೀಕ್ಷೆಯಿದೆ.

**ಕಾಗೋಡು ತಿಮ್ಮಪ್ಪ:** ಸರ್ಕಾರದ ತೀರ್ಮಾನಕ್ಕೆ ವಿರೋಧವಾಗಿ ಸಾರಿಗೆ ಸಂಸ್ಥೆಯವರು ಖಾಸಗಿಯವರಿಗೆ ಅನುಕೂಲವಾಗುವಂತೆ ವರ್ತಿಸುವುದರಿಂದ ಇದನ್ನು ಹೆಚ್ಚು ಲಾಭದಾಯಕವಾಗಿ ಮಾಡಲು ಸರ್ಕಾರ ಮಧ್ಯ ಪ್ರವೇಶಿಸುವುದು ಉಚಿತವಲ್ಲವೆ?

ಅಜೀಜ್‌ಸೇಟ್: ಸರ್ಕಾರದ ದೃಷ್ಟಿಕೋನದಿಂದ ಎಂ.ಎಸ್.ಆರ್.ಟಿ.ಸಿ.ಯು ವ್ಯಾಪಾರಿ ರೀತಿಯಂತೆ ಹೆಚ್ಚು ಆರ್ಥಿಕಾಭಿವೃದ್ಧಿಯಿಂದ ಕೆಲಸ ಮಾಡಬೇಕು. ಮಹಾರಾಷ್ಟ್ರ ಸಾರಿಗೆ ಸಂಸ್ಥೆಯಂತೆ ನಮ್ಮ ಸಾರಿಗೆ ಸಂಸ್ಥೆಯು ಕಾರ್ಯನಿರ್ವಹಿಸಬೇಕು. ಇತ್ತೀಚಿನ ವರ್ಷಗಳಲ್ಲಿ ಜಾಹೀರಾತು ಆದಾಯದ ಬಾಕಿ ವಸೂಲಾತಿ ಕಡಿಮೆಯಾಗಿದೆ ಎಂಬುವುದು ನಿಜ. ಹಿಂದಿನ ಏಜನ್ಸಿಯಿಂದ 3,25,000 ಬಂದಿತ್ತು ಈಗ 12,00,000 ಕ್ಕೂ ಹೆಚ್ಚು ನೀಡಲು ಬಂದಿದ್ದಾರೆ. ಇದಕ್ಕಾಗಿ ಟೆಂಡರ್‌ಗಳನ್ನು ಕರೆದರೆ ಇನ್ನೂ ಹೆಚ್ಚಿನ ಆದಾಯ ಬರಬಹುದೆಂಬ ನಿರೀಕ್ಷೆಯಿದೆ.

## 14 ಮಾರ್ಚ್ 1973 ರಂದು ಬೆಂಗಳೂರು ನಗರದ ಸಂಚಾರ ವ್ಯವಸ್ಥೆಯು ಉತ್ತಮಗೊಳಿಸುವ ಬಗ್ಗೆ ನಡೆದ ಚರ್ಚೆ:

**ಶ್ರೀ ಟಿ.ಆರ್. ಶಾಮಣ್ಣ:** ಬೆಂಗಳೂರು ನಗರದಲ್ಲಿ ಸಾರಿಗೆ ವ್ಯವಸ್ಥೆ ಪೂರಾ ಹದಗೆಟ್ಟು ಹೋಗಿದೆ. ಇದನ್ನು ಸರಿಪಡಿಸಲು ತೆಗೆದುಕೊಂಡ ಕಾರ್ಯಕ್ರಮವೇನು?

**ಶ್ರೀ ಅಜೀಜ್ ಸೇಟ್:** ಪೂರಾ ಹದಗೆಟ್ಟಿದೆ ಎಂಬುದನ್ನು ನಾನು ಒಪ್ಪುವುದಿಲ್ಲ, ತೊಂದರೆಗಳಿವೆ ಎಂಬುದನ್ನು ಒಪ್ಪುತ್ತೇನೆ.

**ಶ್ರೀ ಟಿ.ಆರ್. ಶಾಮಣ್ಣ:** ನಗರದ ನಾಗರೀಕರು 4-5 ಫರ್ಲಾಂಗ್ ದೂರ ನಡೆಯಬೇಕಾಗಿದೆ. ಬಸ್ ಶೆಲ್ಟರ್‌ಗಳು ಕೂಡ ಇಲ್ಲ.

**ಶ್ರೀ ಅಜೀಜ್‌ಸೇಟ್:** ಕೆಲವು ಕಡೆ ರೈಲಿಂಗ್‌ಗಳನ್ನು ಹಾಕಲಾಗಿದೆ ಮತ್ತು ಕೆಲವು ಕಡೆ ಷೆಲ್ಟರ್‌ಗಳನ್ನು ನಿರ್ಮಿಸಲಾಗಿದೆ. ಇನ್ನು ಕೆಲವು ಸೀಟಿಂಗ್ ಅಕಾಮಿಡೇಷನ್ ಇದ್ದಂತ ಬಸ್‌ಗಳನ್ನು ಸ್ಟ್ಯಾಂಡಿಂಗ್‌ಗೆ ಬದಲಾಯಿಸಲಾಗಿದೆ. ಇನ್ನೂ 59 ಡಬಲ್ ಬಸ್‌ಗಳನ್ನು ಖರೀದಿಸಲು ಪ್ರಯತ್ನ ನಡೆದಿದೆ.

**ಶ್ರೀ ಟಿ.ಎಂ. ಮಂಜುನಾಥ್:** ರಾಜ್ಯದ ಬೇರೆ ಬೇರೆ ರಸ್ತೆಗಳಲ್ಲಿ ಕಾಂಟ್ರಾಕ್ಟ್ ಪರ್ಮಿಟ್ ನೀಡುವಂತೆ ಇಲ್ಲೂ ನೀಡುತ್ತೀರಾ?

**ಶ್ರೀ ಅಜೀಜ್‌ಸೇಟ್:** ಇಲ್ಲಿ ಅಂಥಾ ಅವಶ್ಯಕತೆ ಕಂಡುಬರುವುದಿಲ್ಲ ಆದುದರಿಂದ ಇಲ್ಲಿ ಕೊಡುವುದಿಲ್ಲ.

## 19 ಮಾರ್ಚ್ 1973 ರಂದು ನಡೆದ ಎಂ.ಎಸ್.ಆರ್.ಟಿ.ಸಿ.ಸಂಸ್ಥೆಯಲ್ಲಿ ಹರಿಜನ ಗಿರಿಜನರ ಪ್ರಾತಿನಿಧ್ಯದ ಬಗ್ಗೆ.

ಶ್ರೀ ಮಲ್ಲಿಕಾರ್ಜುನ ಖರ್ಗೆ: ಎಂ.ಎಸ್.ಆರ್.ಟಿ.ಸಿ.ಯಲ್ಲಿ ಕ್ಲಾಸ್ 1 ರಲ್ಲಿ ಎಸ್‌ಸಿ: ಎಸ್‌ಟಿ ನೇಮಕ ಮಾಡಿಲ್ಲ ಇದರ ಬಗ್ಗೆ ನಿಮ್ಮ ಕ್ರಮ ಏನು?

ಶ್ರೀ ಅಜೀಜ್‌ಸೇಟ್: ಸಂಸ್ಥೆಯ ಆರಂಭದಿಂದಲೂ 16 ವರ್ಷಗಳಿಂದ ಈ ಪ್ರಮಾದ ನಡೆದುಕೊಂಡು ಬಂದಿದೆ. ರಾಜ್ಯಾಂಗದ ಆದೇಶದಂತೆ ನಾವು 15 ಶೇಕಡಾ ಮೀಸಲಾತಿಯನ್ನು ಎಸ್.ಸಿ. ಸಮೂಹದವರಿಗೆ, ಶೇಕಡಾ 3 ಎಸ್.ಟಿ. ಮತ್ತು ಶೇಕಡಾ 30 ಹಿಂದುಳಿದ ಜನಾಂಗದವರಿಗೆ ನೀಡಿದ್ದೇವೆ. Interstate Seniority list ಇನ್ನೂ Finalise ಆಗಿಲ್ಲದಿರುವುದರಿಂದ ಕೆಲವು ಖಾಲಿ ಹುದ್ದೆಗಳನ್ನು ಭರ್ತಿ ಮಾಡಲಾಗಿಲ್ಲ ಮತ್ತು ಆಯ್ಕೆ ಮಾಡುವಾಗ ಈ ಕೊರತೆಯನ್ನು ಗಮನದಲ್ಲಿರಿಸಿಕೊಂಡಿರುತ್ತೇವೆ ಮತ್ತು ಹಿತಾಸಕ್ತಿಗಳನ್ನು ಕಾಪಾಡಲು ಇಬ್ಬರು ಎಸ್.ಸಿ. ಸಮುದಾಯಕ್ಕೆ ಸೇರಿದವರನ್ನು ಆಯ್ಕೆ ಸಮಿತಿಯಲ್ಲಿ ನೇಮಕ ಮಾಡುತ್ತೇವೆ.

ಶ್ರೀ ಎಸ್.ಎಂ. ಯಹ್ಯಾ: ಸರ್ಕಾರ ಸಾರಿಗೆ ಸಂಸ್ಥೆಯ ನೌಕರವರ್ಗ 23,341 ಎಂದು ತಿಳಿಸಿದೆ. ಇದು ಅಗತ್ಯಕ್ಕಿಂತ ಹೆಚ್ಚು ಎನಿಸಲಿಲ್ಲವೆ?

ಶ್ರೀ ಅಜೀಜ್‌ಸೇಟ್: ಕೆಲವು ಸಂದರ್ಭಗಳಲ್ಲಿ ಇದು ಅಗತ್ಯಕ್ಕಿಂತ ಹೆಚ್ಚಾಗಿದೆ. ವಿಶೇಷವಾಗಿ ಕಂಡಕ್ಟರ್‌ಗಳ ನೇಮಕಾತಿಯಲ್ಲಿ ಅದನ್ನು ಸರಿಪಡಿಸುವಂತೆ ಸಾರಿಗೆ ಸಂಸ್ಥೆಯ ಅಧಿಕಾರಿಗಳಿಗೆ ತಿಳಿಸಲಾಗಿದೆ.

ಶ್ರೀ ಸಿ. ಭೈರೇಗೌಡ: ಎಸ್.ಸಿ.: ಎಸ್.ಟಿ.ಗಳಿಗೆ ಕೊಡಬೇಕಾದ ಶೇಕಡಾ 18 ಹುದ್ದೆಯನ್ನು ಭರ್ತಿ ಮಾಡದಿರುವುದಕ್ಕೆ 1956ನೇ ಇಸವಿಯಲ್ಲಿ ಇಂಟಿಗ್ರೇಷನ್ ಆದದ್ದು ಕಾರಣ ಎಂದು ಹೇಳಿದ್ದೀರಿ. 1956 ರಿಂದ ಬೇಕಾದಷ್ಟು ನೇಮಕಾತಿ ಆಗಿದೆ. ಅದರಲ್ಲಿ ರಾಜ್ಯಾಂಗದ ಪ್ರಕಾರ ಶೇಕಡಾ 18 ಮೀಸಲಾತಿ ನೀಡಬೇಕೆಂದು ಇದ್ದರೂ ಯಾಕೆ ನೀಡಲಾಗಲಿಲ್ಲ?

ಶ್ರೀ ಅಜೀಜ್‌ಸೇಟ್: 16 ವರ್ಷಗಳಿಂದ ತೆಗೆದುಕೊಳ್ಳದೇ ಇರುವುದಕ್ಕೆ ನಾನು ಹೊಣೆಗಾರನಲ್ಲ, ಈಗ ನನ್ನ ಕೈಲಿ ಅಧಿಕಾರ ಬಂದಿದೆ, ರಾಜ್ಯಾಂಗದ ಪ್ರಕಾರ ಹರಿಜನ ಗಿರಿಜನರಿಗೆ ಎಷ್ಟು ಮೀಸಲಾತಿ ನೀಡಬೇಕೋ ಅದನ್ನು ಕೊಡುವುದಕ್ಕೆ ಪ್ರಯತ್ನ ಮಾಡುತ್ತೇನೆ.

## 26ನೇ ಮಾರ್ಚ್ 1973 ರಂದು ನಡೆದ ಆಟೋರಿಕ್ಷಾಗಳಿಗೆ ಮೀಟರ್ ಅಳವಡಿಕೆಯ ಕುರಿತ ಚರ್ಚೆ:

ಕಾಗೋಡು ತಿಮ್ಮಪ್ಪ: ಕಾರ್ಮಿಕ ಸಚಿವರು ಉತ್ತರಿಸುವರೆ?

ಎ) ಆಟೋರಿಕ್ಷಾಗಳಿಗೆ ನೂತನ ಮೀಟರ್ ಅಳವಡಿಕೆಯ ಬಗ್ಗೆ ಸರ್ಕಾರ ನಿರ್ದೇಶನ ನೀಡಿದೆಯೆ?

ಬಿ) ಹಾಗಿದ್ದಲ್ಲಿ ಯಾವ ಕಂಪನಿಗಳಿಗೆ ಸರ್ಕಾರ ಈ ಅವಕಾಶ ನೀಡಿದೆ?

ಸಿ) ಮೀಟರ್ ವಿತರಣೆ ಕಾರ್ಯವನ್ನು ಯಾವ ಏಜನ್ಸಿಗೆ ನೀಡಲಾಗಿದೆ?

ಶ್ರೀ ಅಜೀಜ್‌ಸೇಟ್: ಮೈಸೂರು ಸಾರಿಗೆ ಇಲಾಖೆಯವರು ಆಟೋರಿಕ್ಷಾಗಳಿಗೆ ಮೀಟರ್ ಅಳವಡಿಸಲು ಸೂಚಿಸಿರುತ್ತಾರೆ. ಪೂನಾದ ಮೆ: ಡೈಮಂಡ್ ಕ್ಲಾಕ್ ಮ್ಯಾನುಫ್ಯಾಕ್ಚರಿಂಗ್ ಕಂಪನಿಯವರು ತಯಾರಿಸಿದ ಡೈಮಂಡ್ ಫೇರ್ ಮೀಟರ್ಸ್, 2) ಬಾಂಬೆಯ ವಿಟ್ರೋನಿಕ್ಸ್ ಸಂಸ್ಥೆಯವರಿಂದ ಫೇರ್ ಮಾಸ್ಟರ್ ಮೀಟರ್ಸ್ ಮತ್ತು 3) ಮೆ: ಏಬಲ್ ಟೂಲ್ ರೂಮ್‌ನವರಿಂದ ಕರೆಕ್ಟ್ ಫೇರ್ ಮೀಟರ್ಸ್ ಅನುಮೋದಿಸಲ್ಪಟ್ಟಿದೆ. ಏಜೆಂಟರನ್ನು ತಯಾರಕರೇ ನೇಮಿಸಿರುವುದರಿಂದ ಸರ್ಕಾರ ಮಾಡುವುದೇನೂ ಇಲ್ಲ.

ಕಾಗೋಡು ತಿಮ್ಮಪ್ಪ: ಹೊಸದಾಗಿ ಆಟೋರಿಕ್ಷಾಗಳಿಗೆ ಮೀಟರನ್ನು ಹಾಕಬೇಕೆಂಬುದು ಏಕೆ ತೀರ್ಮಾನಿಸಲಾಯಿತು? ಮತ್ತು ಇದರಲ್ಲಿ ಯಾರಿಗಾದರೂ ಅನುಕೂಲ ಮಾಡಿಕೊಡಬೇಕೆಂದು ಈ ತೀರ್ಮಾನವೆ?

ಶ್ರೀ ಅಜೀಜ್‌ಸೇಟ್: ಮೈಸೂರು ಮೋಟಾರು ಕಾಯಿದೆ 1963ರ ರೂಲ್ ನಂ. 261ರ ಪ್ರಕಾರ ಪ್ರತಿಯೊಂದು ಟ್ಯಾಕ್ಸಿಯು ಮೀಟರನ್ನು ಇಂಡಿಕೇಟರ್‌ನ ಸಮೇತ ಹೊಂದಬೇಕೆಂದು ವಿಧಿಸಲಾಗಿದೆ. ಈ ಮೀಟರ್ ಹೊರಗಿನಿಂದ ಮತ್ತು ಒಳಗೆ ಕುಳಿತ ಪ್ರಯಾಣಿಕನಿಗೂ ಕಾಣುವಂತಿರಬೇಕು. 1969ರಲ್ಲೇ ಆಟೋರಿಕ್ಷಾಗಳಿಗೆ ಮೀಟರ್ ಅಳವಡಿಕೆಯ ಬಗ್ಗೆ ಮೈಸೂರು ಸಾರಿಗೆ ಇಲಾಖೆಯವರು ತೀರ್ಮಾನಿಸಿದರೂ ಕೆಲವು ಆಟೋರಿಕ್ಷಾ ಮಾಲೀಕರು ಕೋರ್ಟ್‌ಗೆ ಹೋಗಿದ್ದರಿಂದ ತಡವಾಯಿತು. ಇದರ ಸ್ಟೇ 1972ರಲ್ಲಿ ತೆರೆಯಲ್ಪಟ್ಟಿತು ಮತ್ತು ನಾವು ಸಾರಿಗೆ ಇಲಾಖೆಯವರಿಗೆ ಇದನ್ನು ಕಾರ್ಯಗತಗೊಳಿಸಲು ತಿಳಿಸಿದ್ದೇವೆ.

ಶ್ರೀ ಕಾಗೋಡು ತಿಮ್ಮಪ್ಪ: ಮೀಟರು ಏಜನ್ಸಿಯವರು ಕೆಲವರು ಯಾರು ಇದ್ದಾರೆಂದು ಇಲ್ಲಿ ಹೇಳಿದ್ದಾರೆ, ಅವರಿಗೆ ಅನುಕೂಲ ಮಾಡಿಕೊಡಲು ಉದ್ದೇಶಪೂರ್ವಕವಾಗಿ ಇದನ್ನು ತಡಮಾಡಿ ಶೀಘ್ರವಾಗಿ ಕ್ರಮಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಅಜೀಜ್‌ಸೇಟ್: ಇದು ಸತ್ಯಕ್ಕೆ ದೂರವಾದುದು. ಇದರಲ್ಲಿ ಯಾರಿಗೂ ಸಹಾಯ ಮಾಡಬೇಕೆಂದು ಮಾಡಿಲ್ಲ. 1969ರಲ್ಲೇ ಇದನ್ನು ಹಾಕಬೇಕೆಂದು ತಿಳಿಸಿದಾಗ ಕೆಲವರು ಕೋರ್ಟಿಗೆ ಹೋಗಿ ಸ್ಟೇ ತಂದರು, ಕೆಲವರು ಕಾಲಾವಕಾಶ ಕೇಳಿದರು. ಈಗ ಅದು ತೆರವಾಗಿದೆ ಎಲ್ಲಾ ಆಟೋರಿಕ್ಷಾಗಳಿಗೆ ಹೊಸ ಮೀಟರ್ ಜೋಡಣೆಗೆ 6 ತಿಂಗಳು ಕಾಲಾವಕಾಶ ನೀಡಲಾಗಿದೆ. We are insisiting them that the new meters should be fixed. We have given them some breathing time to shift from old meters to new.

ಕಾಗೋಡು ತಿಮ್ಮಪ್ಪ: ಇಲ್ಲಿ ಖಾಸಗಿ ಕಂಪನಿಗಳ ಹೆಸರು ನೀಡಿದ್ದೀರಿ. ಮೀಟರನ್ನು ತಯಾರಿಸುವ ಸರ್ಕಾರಿ ಕಂಪನಿಗಳು ಇಲ್ಲವೆ?

ಶ್ರೀ ಅಜೀಜ್‌ಸೇಟ್: ಸರ್ಕಾರಿ ಕಂಪನಿ ಖಾಸಗಿ ಕಂಪನಿ ಎಂಬುದು ವಿಷಯವಲ್ಲ. ಈ ಮೀಟರ್‌ಗಳನ್ನು ಸಾರಿಗೆ ಇಲಾಖೆ ಪರೀಕ್ಷಿಸಿದೆ ಮತ್ತು ಅನುಮೋದಿಸಿದೆ.

ಕ.ರಾ.ರ.ಸಾ. ಸಂಸ್ಥೆಯ ನಿರ್ವಾಹಕ ಸಂಖ್ಯಾ ಬಲದ ಬಗ್ಗೆ ಚರ್ಚೆ.
ದಿನಾಂಕ: 11, ಮಾರ್ಚ್ 1992)

ಶ್ರೀ ಎಸ್. ಚಿಕ್ಕಮಾದು: ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಮಂಜೂರಾಗಿರುವ ನಿರ್ವಾಹಕರ ಹುದ್ದೆ ಎಷ್ಟು ಎಂದು ಹೇಳಿದ್ದೆ. ಅದಕ್ಕೆ 17,921 ಎಂದು ಉತ್ತರ ಕೊಟ್ಟಿದ್ದಾರೆ. ಇದರಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವರು 16,982 ಮಂದಿಯಾದರೆ ಉಳಿದ 939 ನಿರ್ವಾಹಕರ ಹುದ್ದೆಗಳನ್ನು ಯಾವಾಗ ತುಂಬಲಾಗುತ್ತದೆ? ಇದರ ಬಗ್ಗೆ ಸರ್ಕಾರ ಏನು ಕ್ರಮ ತೆಗೆದುಕೊಂಡಿದೆ? (ಸಾರಿಗೆ ಸಚಿವರು).

ಶ್ರೀ ಅಜೀಜ್‌ಸೇಟ್: ಅದಕ್ಕೆ ರೆಕ್ರೂಟ್‌ಮೆಂಟ್ ರೂಲ್ಸ್ ಅಮೆಂಡ್ ಆಗಬೇಕಾಗಿತ್ತು. ಅದನ್ನು ಈಗ ತಾನೇ ಅಮೆಂಡ್ ಮಾಡಿದ್ದೇವೆ. ರೆಕ್ರೂಟ್‌ಮೆಂಟ್ ಕಮಿಟಿಯಲ್ಲಿ ಮೊದಲು ಇಬ್ಬರು ನಾನ್ ಆಫಿಷಿಯಲ್ ಮೆಂಬರ್ಸ್ ಹಾಕಬೇಕೆಂದು ಇತ್ತು. ಈಗ 4 ಜನರನ್ನು ಹಾಕಬೇಕೆಂದು ಇದೆ. ಅದರ ಪ್ರಕಾರ ಅಮೆಂಡ್‌ಮೆಂಟ್ ಆಗಬೇಕಿತ್ತು. ಇನ್ನು ಹದಿನೈದು ದಿನಗಳಲ್ಲಿ ಕಮಿಟಿ ಮಾಡಿ ರಿಕ್ರೂಟ್‌ಮೆಂಟ್ ಶುರು ಮಾಡಿದ್ದೇವೆ.

ಶ್ರೀ ಚಿಕ್ಕಮಾದು: ಈ ನಿರ್ವಾಹಕರಲ್ಲಿ ಕೆಲವರು ವರಮಾನವನ್ನು ಲಪಟಾಯಿಸಿ, ದುರುಪಯೋಗ ಪ್ರಕರಣಗಳಲ್ಲಿ ಸಿಕ್ಕಿಹಾಕಿಕೊಂಡಿದ್ದಾರೆ. ಅವರ ಮೇಲೆ ಏನು ಕ್ರಮ ತೆಗೆದುಕೊಂಡಿದ್ದೀರಿ ಎಷ್ಟು ಕೇಸುಗಳು ಇತ್ಯರ್ಥವಾಗಿದೆ?

ಶ್ರೀ ಅಜೀಜ್‌ಸೇಟ್: ಅಂತವು ಬಂದಿದೆ. ಅದರ ಮೇಲೆ ನಾವು ಕ್ರಮ ತೆಗೆದುಕೊಂಡಿದ್ದೇವೆ. ಯಾರು ಕಾನೂನು ಬಾಹಿರವಾಗಿ ಕೆಲಸ ಮಾಡುತ್ತಾರೋ ಅವರ ಮೇಲೆ ಕ್ರಮ ತೆಗೆದುಕೊಂಡಿದ್ದೇವೆ.

ಶ್ರೀ ಬಿ.ಹೆಚ್. ಯಂಕಾನಾಯಕ್: ದಾವಣಗೆರೆ ಬಳ್ಳಾರಿ ಡಿಪೋಗಳಲ್ಲಿ ಡ್ರೈವರ್, ಕಂಡಕ್ಟರ್ ಇಲ್ಲದೇ ಬಸ್ಸುಗಳನ್ನು ಓಡಿಸುತ್ತಿಲ್ಲ. ನಮಗೆ ಸರ್ಕಾರಿ ಬಸ್‌ಗಳು ಇಲ್ಲ. ಖಾಸಗಿ ಬಸ್‌ಗಳನ್ನಾದರೂ ಕೊಡಿ ಎಂದು ಜನ ಕೇಳುತ್ತಾರೆ. ನವೆಂಬರ್‌ನಲ್ಲಿ ನಡೆದ ಅಧಿವೇಶನದಲ್ಲಿ ಮಾನ್ಯ ಸಚಿವರನ್ನು ಕೇಳಿದಾಗ ಒಂದು ವಾರದಲ್ಲಿ ಪ್ರಾಬ್ಲಂ ಪರಿಹಾರ ಮಾಡುವುದಾಗಿ ತಿಳಿಸಿದರು. 3 ತಿಂಗಳಾದರೂ ಏನೂ ಆಗಲಿಲ್ಲ. ನಿಮಗೆ ಸರಿಯಾಗಿ ನಡೆಸುವುದಾದರೆ, ನಡೆಸಿ, ಇಲ್ಲದಿದ್ದರೆ ಖಾಸಗಿಯವರಿಗೆ ವಹಿಸಿಕೊಟ್ಟು ಜನರಿಗೆ ಅನುಕೂಲ ಮಾಡಿಕೊಡಿ.

ಶ್ರೀ ಅಜೀಜ್‌ಸೇಟ್: ನಿಜ. ಈ ರಿಕ್ರೂಟ್‌ಮೆಂಟ್ ನಾನಾ ಕಾರಣಗಳಿಂದ 3ನೇ ಬಾರಿಗೆ ಸ್ಟೇ ಆಗಿದೆ. ಒಂದು ಸಾರಿ ರಿಕ್ರೂಟ್‌ಮೆಂಟ್ ಮಾಡುವಾಗ ನೇರವಾಗಿ ಉದ್ಯೋಗ ವಿನಿಮಯ ಕೇಂದ್ರದಿಂದ ತೆಗೆದುಕೊಳ್ಳಬೇಕೆಂದು ವಿಚಾರ ಮಾಡಿದಾಗ, ಗ್ರಾಮೀಣ ಪ್ರದೇಶದವರೆಗೆ ತೊಂದರೆಯಾಗುತ್ತದೆಂದು ಸದಸ್ಯರು ಆಕ್ಷೇಪಣೆ ಮಾಡಿದರು. ನಂತರ ರೂಲ್ಸ್ ಅಮೆಂಡ್ ಮಾಡುವಾಗ, ಇಬ್ಬರನ್ನು ಹಾಕಿರುವುದು ಸರಿಯಲ್ಲ, ನಾಲ್ಕು ಸದಸ್ಯರು ಇರಬೇಕೆಂದು ಹೇಳಿದರು. ಹೀಗಾಗಿ 3ನೇ ಬಾರಿಗೆ ರೂಲ್ಸ್ ಅಮೆಂಡ್ ಆಯಿತು. ಇಂಟರ್‌ವ್ಯೂ ಮಾಡಬೇಕಾದರೆ ಶೇ. 15 ವೆಯಿಟೇಜ್ ಗ್ರಾಮೀಣ ಪ್ರದೇಶದವರಿಗೆ ನೀಡಬೇಕೆಂದು ತೀರ್ಮಾನಿಸಲಾಯಿತು. ಕಮಿಟಿ ಸದಸ್ಯರಿಗೆ ಶೇ. 25 ಮಾರ್ಕ್ಸ್ ಏನು ಇಡಲಾಗಿತ್ತು. ಅದನ್ನು ನಾವು ತೆಗೆದುಹಾಕಿದ್ದೇನೆ. ಮತ್ತೆ ಕೆಲವರಿಗೆ ಸೆಲಕ್ಷನ್ ಮಾಡಿ ಕೆಲಸ ನೀಡಲಾಗಿತ್ತು. ಅವರಲ್ಲಿ ಬ್ಯಾಡ್ ಕ್ಯಾರೆಕ್ಟರ್ ಇದೆ ಎಂದು ದೂರುಗಳು ಬಂದಿವೆ. ಆದ್ದರಿಂದ ಈಗ ಮಾಡಿರುವ ತೀರ್ಮಾನದಂತೆ ಯಾರು ಕೆಲಸಕ್ಕೆ ಆಯ್ಕೆಯಾಗುತ್ತಾರೋ ಅವರಿಗೆ ಪೊಲೀಸ್ ವೆರಿಫಿಕೇಷನ್ ಮಾಡಿ, ಅವರ ಬಗ್ಗೆ ಕೆಟ್ಟ ವರದಿ ಬಂದರೆ, ಆಯ್ಕೆಯಾಗಿದ್ದರೂ ಸಾರಿಗೆ ಸಂಸ್ಥೆಗೆ ನೇಮಕ ಮಾಡುವುದಿಲ್ಲ. ಇದರಂತೆ ಕೆಲವು ಕಡೆ ಆಗಿದೆ. ಈ ತೊಂದರೆಗಳನ್ನು ಕಡಿಮೆಮಾಡಲು ತಾತ್ಕಾಲಿಕವಾಗಿ ಚಾಲಕ ಮತ್ತು ನಿರ್ವಾಹಕರನ್ನು ನೇಮಿಸಿಕೊಳ್ಳಲು ಸೂಚಿಸಿದ್ದೇವೆ.

ಶ್ರೀ ಬಿ.ಹೆಚ್. ಯಂಕಾನಾಯಕ್: ಕೆಲವು ಕಂಡಕ್ಟರ್ ಮೇಲೆ ಕೇಸ್ ಹಾಕಿದ್ದಿರಿ. ಆ ಕೇಸು ಇತ್ಯರ್ಥವಾಗುವುದು ಯಾವಾಗ? ನಿಮಗೆ ಸರ್ಕಾರಿ ಬಸ್ ಓಡಿಸಿ ತೊಂದರೆಯಾದರೆ ಖಾಸಗಿ ಬಸ್ ಓಡಿಸಿ ಎಂದು ಜನ ಕೇಳುತ್ತಾರೆ. ಆದ್ದರಿಂದ ಕಂಡಕ್ಟರ್‌ರನ್ನು ಸೆಲಕ್ಟ್ ಮಾಡಿ ಅಥವಾ ಖಾಸಗಿಯವರಿಗೆ ಪರವಾನಗಿ ಕೊಡಿ.

ಶ್ರೀ ಅಜೀಜ್‌ಸೇಟ್: ಮಾನ್ಯ ಸದಸ್ಯರಿಗೆ ಇಷ್ಟು ಭರವಸೆ ನೀಡಬಹುದು. ಈಗ ಕೆ.ಎಸ್.ಆರ್.ಟಿ.ಸಿಯಲ್ಲಿ ಏನು ತೊಂದರೆಗಳು ಅಡಚಣೆಗಳು ಬಂದಿವೆ. ಅವೆಲ್ಲಾ ಬದಲಾವಣೆಯಾಗುತ್ತಿದೆ. ಇನ್ನು ಮುಂದೆ ಈ ರೀತಿ ಆಗುವುದಿಲ್ಲ.

ಶ್ರೀ ಬಿ.ಹೆಚ್. ಯಂಕಾನಾಯಕ್: ಎಷ್ಟು ದಿನಗಳಲ್ಲಿ ಬದಲಾವಣೆ ಮಾಡಿ ಸರಿಯಾಗಿ ಓಡಿಸುವ ವ್ಯವಸ್ಥೆ ಮಾಡುತ್ತೀರಿ. ಇಲ್ಲವೇ ಪ್ರೈವೇಟ್‌ನವರಿಗೆ ಬಿಟ್ಟುಕೊಡಿ.

ಶ್ರೀ ಅಜೀಜ್‌ಸೇಟ್: ಪ್ರೈವೇಟೈಜೇಷನ್ ಮಾಡಬೇಕೆಂದು ಯೋಜನೆ ಮಾಡುತ್ತಿದ್ದೇವೆ. ಕೊಟ್ಟುಬಿಡಿ ಎಂದರೆ ಆಗುವುದಿಲ್ಲ. ಅದಕ್ಕೂ ನಿಯಮಗಳೂ ಅದೂ ಇದು ಯೋಚನೆ ಮಾಡಬೇಕಾಗುತ್ತದೆ. I will take some time. I have also have a mind to privatise certain sections of K.S.R.T.C.

## ವಿಧಾನ ಪರಿಷತ್ತಿನಲ್ಲಿ ಶ್ರೀ ಅಜೀಜ್‌ಸೇಟ್ ಮಾಡಿದ ಭಾಷಣಗಳು

### ಮೈಸೂರು ಮೋಟಾರು ವಾಹನ ತೆರಿಗೆ (ತಿದ್ದುಪಡಿ) ಮಸೂದೆ – 1972ರ ಮೇಲೆ ನಡೆದ ಚರ್ಚೆಗೆ ಉತ್ತರ:

ಶ್ರೀ ಅಜೀಜ್‌ಸೇಟ್: ಮಾನ್ಯ ಸಭಾಪತಿಗಳೇ, ಮಾನ್ಯ ಸದಸ್ಯರು ನೀಡಿದ ಅಮೂಲ್ಯವಾದ ಸಲಹೆಗಳಿಗೆ ನಾನು ಸದಾ ಋಣಿಯಾಗಿರುತ್ತೇನೆ. ಇಲ್ಲಿ ಮಾಡಿರುವ ಭಾಷಣಗಳನ್ನು ಕೇಳಿದ ಮೇಲೆ ನನ್ನ ಕೆಲಸ ಹಗುರವಾಯಿತೆಂದು ಭಾವಿಸುತ್ತೇನೆ. ಶ್ರೀ ಎಂ.ವಿ. ವೆಂಕಟಪ್ಪನವರು ತೆರಿಗೆ ಜಾಸ್ತಿಯಾಯಿತೆಂದು ಹೇಳಿದರೆ ಮತ್ತೊಬ್ಬ ಸದಸ್ಯರಾದ ವಿಶ್ವನಾಥ ಸ್ವಾಮಿಯವರು ತೆರಿಗೆಯ ಹೆಚ್ಚಳದಿಂದ ಖಾಸಗಿ ಮಾಲೀಕರಿಗೆ ಅನುಕೂಲವಾಗುತ್ತದೆಯೆಂದು ಹೇಳಿದರು. ಇದರಿಂದ ತೆರಿಗೆ ಹೆಚ್ಚಳದಿಂದ ತೊಂದರೆಯುಂಟಾಗಿಲ್ಲವೆಂದು ತಿಳಿದಿದ್ದೇನೆ.

ರಾಜ್ಯ ರಸ್ತೆ ಸಾರಿಗೆ ಮತ್ತು ಖಾಸಗಿ ಬಸ್ ವ್ಯವಸ್ಥೆಯ ನಡುವೆ ಹಲವಾರು ವ್ಯತ್ಯಾಸಗಳು ಚರ್ಚೆಯ ಸಮಯದಲ್ಲಿ ಮಾಡಿದೆ. ರಾಜ್ಯ ಸಾರಿಗೆ ಮಾರ್ಗಗಳು ನಿರ್ದಿಷ್ಟ ಮಾರ್ಗಕ್ಕೆ ರೂಪಿತವಾಗುತ್ತವೆ ಮತ್ತು ದರ ಕಾನೂನಿನಂತೆ ರೂಪಿತವಾಗುತ್ತದೆ. ಆದರೆ ಖಾಸಗಿ ಮಾಲೀಕರು ಅವರ ಅನುಕೂಲಕ್ಕೆ ತಕ್ಕಂತೆ ವರ್ತಿಸುತ್ತಾರೆ. ಅವರಿಗೆ ಲಾಭ ಬರದಿದ್ದರೆ ಮಾರ್ಗ ಸಂಚಾರವನ್ನೇ ಬದಲಾಯಿಸುತ್ತಾರೆ. ಸಾಧಾರಣವಾಗಿ ಪರ್ಮಿಟ್‌ಗಳು 3-5 ವರ್ಷದವರೆಗೆ ನೀಡಲಾಗುತ್ತದೆ. ನಾನು ಯಾವುದೇ ಪರ್ಮಿಟ್‌ಯಿಲ್ಲದೇ ಬಸ್ ಸಂಚರಿಸುವುದನ್ನು ಸರ್ಕಾರ ನೋಡಿಕೊಂಡು ಸುಮ್ಮನಿರುವುದಿಲ್ಲವೆಂದು ಸದಸ್ಯರಿಗೆ ಭರವಸೆ ನೀಡುತ್ತೇನೆ. ನಾನು ಅಧಿಕಾರ ಸ್ವೀಕರಿಸಿದ ನಂತರ ಪ್ರತಿಯೊಂದು ಸರಿಯಾಗಿ ಇರಬೇಕೆಂದು ನೋಡುತ್ತೇನೆ. ಈ ಬಗ್ಗೆ ಹಿಂದಿದ್ದ ಪರಿಸ್ಥಿತಿಗೂ ಈಗಿರುವ ವ್ಯವಸ್ಥೆಗೂ ಇರುವ ವ್ಯತ್ಯಾಸ ಸದಸ್ಯರು ಗುರುತಿಸಿರಬಹುದು.

ಮೈಸೂರು ಮೋಟಾರು ವಾಹನ ಕಾಯಿದೆ 16ರ ಅಧಿನಿಯಮದನ್ವಯ ಸರ್ಕಾರಕ್ಕೆ ಯಾವುದೇ ದುರಭ್ಯಾಸವನ್ನು ತಡೆಟ್ಟಲು ಅಧಿಕಾರವಿದೆ. ಈಗ ಪರ್ಮಿಟ್ಟನ್ನು ಒಬ್ಬ ವ್ಯಕ್ತಿಗೆ ಒಂದು ಸ್ಥಳದಿಂದ ಮತ್ತೊಂದಕ್ಕೆ ನಿರ್ವಹಿಸಲು ನೀಡಲಾಗುತ್ತಿತ್ತು. ಆದರೆ ಆ ಬಸ್ ಪ್ರತಿ ನಿಲ್ದಾಣದಲ್ಲೂ ಜನರನ್ನು ಹತ್ತಿಸಿಕೊಂಡು ಹೋಗುತ್ತದೆ. ಹಿಂದೆ ಪರ್ಮಿಟ್ ನೀಡಿಕೆ ಆರ್.ಟಿ.ಎ.ಗಳ ಬಳಿ ಇರುತ್ತಿತ್ತು. ಇದನ್ನು ತಪ್ಪಿಸಿ ಈ ಪರ್ಮಿಟ್ ನೀಡಿಕೆಯ ಅಧಿಕಾರವನ್ನು ಸಾರಿಗೆ ಕಮೀಷನರ್‌ಗೆ ನೀಡಲು ವಿಧೇಯಕವನ್ನು ತರಲಾಗುತ್ತದೆ. ಹಿಂದೆ ಕೂಡ ಸುಗ್ರೀವಾಜ್ಞೆ ಮಾಡಲಾಗಿತ್ತು. ಆದರೆ ಸದನ ವಿಸರ್ಜನೆಗೊಂಡದ್ದರಿಂದ ತಿದ್ದುಪಡಿ ಮಸೂದೆ ತರಲಾಗಲಿಲ್ಲ.

ಕೆಲವು ಸದಸ್ಯರು ರಾಷ್ಟ್ರೀಕರಣಗೊಂಡ ಮಾರ್ಗಗಳಿಂದ ರಾಜ್ಯ ಸಾರಿಗೆ ಬಸ್‌ಗಳನ್ನು ಹಿಂತೆಗೆಯುವಂತೆ ಸಲಹೆ ಮಾಡಿದ್ದಾರೆ. ಈ ದಿಸೆಯಲ್ಲಿ ಮದ್ರಾಸ್ ರಾಜ್ಯದಲ್ಲಿ ಏನು ಮಾಡಿದ್ದಾರೆಯೋ ಅದರಂತೆ ಮಾಡಲು ನಾನು ಯೋಚಿಸಬೇಕಾಗುತ್ತದೆ. ನನಗೆ ಮದ್ರಾಸ್

ವಿಪನದಿ: 1-8-1972

ರಸ್ತೆ ಸಾರಿಗೆ ಸಂಸ್ಥೆಯ ಕಾರ್ಯ ನಿರ್ವಹಣೆ ಕೂಡ ಗೊತ್ತಿದೆ. ಇತ್ತೀಚೆಗೆ ಮದ್ರಾಸ್, ಆಂಧ್ರ ಮೈಸೂರು ಮತ್ತು ಮಹಾರಾಷ್ಟ್ರದ ಸಾರಿಗೆ ಮಂತ್ರಿಗಳು ಸಭೆ ಸೇರಿ ಅಂತರರಾಜ್ಯ ಬಸ್‌ಗಳ ಓಡಾಟಕ್ಕೆ ಸಂಬಂಧಿಸಿದಂತೆ ಚರ್ಚೆ ನಡೆಸಿದ್ದಾರೆ ಮತ್ತು ಪರಸ್ಪರ ಸಹಕಾರ ನೀಡುವ ಭರವಸೆ ಹೊಂದಿದ್ದಾರೆ. ಈ ಎಲ್ಲಾ ಕೆಲಸಗಳನ್ನು ಅತಿ ಶೀಘ್ರದಲ್ಲೆ ಮಾಡಲಾಗುವುದು ಎಂಬ ಬಗ್ಗೆ ಆಶ್ವಾಸನೆ ನೀಡುತ್ತೇನೆ. ಆದರೆ ಇದರಿಂದ ಪ್ರಯಾಣಿಕರ ಅಥವಾ ಸಾರ್ವಜನಿಕರಿಗೆ ತೊಂದರೆ ಏನೂ ಉಂಟಾಗುವುದಿಲ್ಲ. ನನ್ನ ಮೊದಲ ಆದ್ಯತೆ ಪ್ರಯಾಣಿಕರಿಗೆ ಸರಿಯಾದ ಅನುಕೂಲಗಳನ್ನು ಕಲ್ಪಿಸಿಕೊಡುವುದೇ ಆಗಿದೆ. ಸಾರಿಗೆ ನಿಗಮದ ಅಧಿಕಾರಿಗಳು ಖಾಸಗಿ ಬಸ್ ಮಾಲೀಕರ ಒತ್ತಡಕ್ಕೆ ಮಣಿದಿರುವ ಘಟನೆ ನಡೆದಿದೆ. ಆದ್ದರಿಂದ ಆರ್.ಟಿ.ಎ ಮತ್ತು ಎಸ್.ಟಿ.ಎ.ಗಳ ಸಮರ್ಪಕ ನಿರ್ವಹಣೆಗೆ ಕ್ರಮ ತೆಗೆದುಕೊಳ್ಳಲಾಗುವುದಿಲ್ಲ.

ವೇಗ ನಿಯಂತ್ರಕದ ಬಗ್ಗೆ ಅಧಿಸೂಚನೆ 71ರನ್ವಯ ವೇಗ ನಿಯಂತ್ರಕ ಅಳವಡಿಸಲಾಗಿದೆ. ಆದರೆ ಚಂದ್ರಲೋಕವನ್ನೇ ಮುಟ್ಟುವ ಈ ಕಾಲದಲ್ಲಿ 30 ಕಿ.ಮೀ.ಗಳ ವೇಗವಿರುವುದು ಸರಿಯಲ್ಲ. ಈ ವೇಗ ನಿಯಂತ್ರಕರುಗಳು ಎಲ್ಲಾ ವಾಹನಗಳಿಗೂ ಕಡ್ಡಾಯವಲ್ಲ. ಈಗಿನ ದಿನಗಳಲ್ಲಿ ಜನ ವೇಗದ ಪ್ರಯಾಣ ಇಚ್ಛಿಸುತ್ತಾರೆ. ಆದ್ದರಿಂದ ಹೆಚ್ಚು ವೇಗದೂತ ಮತ್ತು ತಡೆರಹಿತ ಬಸ್‌ಗಳಿಗೆ ಬೇಡಿಕೆ ಹೆಚ್ಚಿದೆ.

ಕಾನೂನನ್ನು ಗೌರವಿಸಬೇಕು. ಅದಕ್ಕಾಗಿ ಮೋಟಾರು ಅಧಿಕಾರಿಗಳು ಮತ್ತು ಸ್ಕ್ವಾಡ್‌ಗಳ ಅನಿರೀಕ್ಷಿತ ಪರೀಕ್ಷೆಗಳನ್ನು ಮಾಡಿ ಸರಿಯಾಗಿ ನಿಯಮಗಳು ಪಾಲನೆಯಾಗುತ್ತಿದೆಯೇ ಎಂದು ಪರೀಕ್ಷಿಸುತ್ತಾರೆ. ಇನ್ನು ಎಂ.ಎಸ್.ಆರ್.ಟಿ.ಸಿ.ಗೆ ಸಂಬಂಧಿಸಿದಂತೆ ಇದೀಗ ಸಂಸ್ಥೆ ಉತ್ತಮ ಸ್ಥಿತಿಯಲ್ಲಿದೆ. ಕೆಲವರು ಹಣದ ಕೊರತೆ, ಬಸ್‌ಗಳ ಕೊರತೆ ಎಂದೆಲ್ಲಾ ಹೇಳಿದರು. ಆದರೆ ಸಧ್ಯದಲ್ಲಿ ಈ ರೀತಿಯ ತೊಂದರೆ ಇಲ್ಲ. ಈ ತನಕ ನಾವು ಲೇಲ್ಯಾಂಡ್ ಮತ್ತು ಮರ್ಸಿಡಿಸ್ ಛಾಸೀಸ್ ಖರೀದಿಸುತ್ತಿದ್ದೆವು. ಈಗ ಇತರೆ ಚಾಸೀಸ್ ಗಳಾದ ಬೆಡ್‌ಫೋರ್ಡ್, ಡಾಡ್ಜ್ ಮುಂತಾದವುಗಳನ್ನು ಖರೀದಿಸೋಣವೆಂದಿದ್ದೇವೆ. ಇದು ಎಂ.ಎಸ್.ಆರ್.ಟಿ.ಸಿ ಯಲ್ಲಿ ಗಮನಾರ್ಹ ಪ್ರಗತಿಯಾಗುತ್ತಿರುವುದನ್ನು ತೋರಿಸುತ್ತದೆ. ಅಲ್ಲದೇ ಈಗ ನಾವು ಬೆಂಗಳೂರು ಬಾಂಬೆ ನಡುವೆ ಮತ್ತು ಬೆಂಗಳೂರು ಮಧುರೈ ನಡುವೆ ಲಕ್ಸುರಿ ಬಸ್ ಪ್ರಯಾಣ ಆರಂಭಿಸಿದ್ದೇವೆ. ಇದು ಸಂಸ್ಥೆಯ ಸಾಧನೆಯನ್ನು ತೋರಿಸುತ್ತದೆ. ಹಳೆಯ ತಪ್ಪುಗಳನ್ನೆಲ್ಲಾ ತಕ್ಷಣವೇ ಬದಲಾಯಿಸಲು ಸಾಧ್ಯವಿಲ್ಲ. ಅದಕ್ಕೆ ಕಾಲಾವಕಾಶಬೇಕು.

ಮಾನ್ಯ ವೆಂಕಟಪ್ಪನವರು ಗುರುತಿಸಿದಂತೆ ಕಾಂಟ್ರಾಕ್ಟ್ ಕ್ಯಾರೇಜು ಬಸ್‌ಗಳು ಒಂದು ನಿರ್ದಿಷ್ಟ ಸ್ಥಳದಿಂದ ಮತ್ತೊಂದು ನಿರ್ದಿಷ್ಟ ಸ್ಥಳಕ್ಕೆ ಪರ್ಮಿಟ್ ಪಡೆದಿದ್ದು ಮಾರ್ಗ ಮಧ್ಯೆ ಜನರನ್ನು ಹತ್ತಿಸಿಕೊಳ್ಳುವಂತಿಲ್ಲ. ನಾವು ಈ ಸಂಬಂಧ ತನಿಖೆಯನ್ನು ತೀವ್ರವಾಗಿ ನಡೆಸಿ ಈ ಕಾನೂನನ್ನು ಭಂಗ ಮಾಡುವ ಬಸ್‌ಗಳ ಮೇಲೆ ಕ್ರಮ ತೆಗೆದುಕೊಳ್ಳುತ್ತೇವೆ. ಮಾರ್ಗಗಳ

ರಾಷ್ಟ್ರೀಕರಣ ರದ್ದತಿಯನ್ನು ನಾನು ಒಪ್ಪುವುದಿಲ್ಲ. ನಾನು ಇದನ್ನು ಪರಿಶೀಲಿಸುತ್ತೇನೆಂದು ಯಾವಾಗ ಹೇಳಿದೆನೆಂದು ನನಗೆ ತಿಳಿದಿಲ್ಲ. ನಾನು ರಾಷ್ಟ್ರೀಕರಣ ರದ್ದತಿಯ ಬಗ್ಗೆ ಯಾವಾಗಲೂ ಮಾತನಾಡಿಲ್ಲ. ಬದಲಾಗಿ ಹೆಚ್ಚಿನ ರಾಷ್ಟ್ರೀಕರಣ ಮಾಡಿ ಏನಾದರೂ ತಪ್ಪುಗಳಿದ್ದರೆ ಅದನ್ನು ಸರಿಪಡಿಸುವ ಬಗ್ಗೆ ಯೋಚಿಸುತ್ತೇನೆ. ನಾನು ಅಸಾಧ್ಯವೆಂಬುವುದು ಇಲ್ಲವೆಂಬುದನ್ನು ನಂಬಿರುವ ಮನುಷ್ಯ. ಅಸಾಧ್ಯವೆಂಬುವುದು ಪದಕೋಶದಿಂದಲೇ ನಿರ್ಗಮಿಸಬೇಕು ಏಕೆಂದರೆ ಎಲ್ಲವೂ ಸಾಧ್ಯ.

ಶ್ರೀ ಎಂ.ವಿ. ವೆಂಕಟಪ್ಪ: ನಾನು ರಾಷ್ಟ್ರೀಕರಣ ರದ್ದತಿಗೆ ಹೇಳಲಿಲ್ಲ. ಕೆಲವು ಮಾರ್ಗಗಳನ್ನು ಪರಿವರ್ತಿಸಲು ಹೇಳಿದೆ ಅಷ್ಟೆ.

ಶ್ರೀ ಅಜೀಜ್‌ಸೇಟ್: ಇಲ್ಲಿ ಕೆಲವು ಮಾರ್ಗಗಳ ಪಾರ್ಶ್ವ ಪರಿವರ್ತನೆಯಾಗಲಿ, ರಾಷ್ಟ್ರೀಕರಣ ರದ್ದತಿಯ ಪ್ರಶ್ನೆಯಾಗಲೀ ಮಾಡುವುದೇ ಇಲ್ಲ. ಕೆಲವು ಸದಸ್ಯರು ಬಸ್‌ಗಳು ಸಮಯಕ್ಕೆ ಸರಿಯಾಗಿ ಓಡದಿರುವ ಬಗ್ಗೆ ತಿಳಿಸಿದರು. ನಾನು ಈ ಬಗ್ಗೆ ವಿಧಾನಸಭೆಯಲ್ಲಿ ಹೇಳಿದಂತೆ ಎಂ.ಎಸ್. ಆರ್.ಟಿ.ಸಿ.ಯಲ್ಲಿ ಒಂದು ಸಂಶೋಧನಾ ವಿಭಾಗವನ್ನು ಆರಂಭಿಸಿ ಜನರ ಒತ್ತಡದ ಸಮಯವನ್ನು ಗುರುತಿಸಿ ಅದರಂತೆ ವಾಹನವನ್ನು ಓಡಿಸುವ ಬಗ್ಗೆ ನಿರ್ಧರಿಸುತ್ತೇವೆ. ಇದರಿಂದ ಪ್ರಯಾಣಿಕರಿಗೆ ಉತ್ತಮ ಸೇವೆ ನೀಡಲು ಅನುಕೂಲವಾಗುತ್ತದೆ.

ಆರ್.ಟಿ.ಎ.ಗೆ ನಾನು ನೀಡಿದ ಅನಿರೀಕ್ಷಿತ ಭೇಟಿಯಿಂದ ಸ್ವಲ್ಪ ಗಮನಾರ್ಹ ಬದಲಾವಣೆ ಉಂಟಾಗಿದೆ. ತೆರಿಗೆ ಪಾವತಿ ಮಾಡಲು ಸಾರ್ವಜನಿಕರು ಇನ್ನು ಮುಂದೆ ತೊಂದರೆ ಪಡಬೇಕಾಗಿಲ್ಲ. ಬದಲಾಗಿ ತೆರಿಗೆಯನ್ನು ಬ್ಯಾಂಕ್‌ಗಳಲ್ಲಿ ಪಾವತಿಸುವ ವ್ಯವಸ್ಥೆಯನ್ನು ಆರಂಭಿಸುತ್ತಿದ್ದೇವೆ. ಕರ್ನಾಟಕ ಬ್ಯಾಂಕಿನ ಚೇರ್‌ಮನ್ ಮತ್ತು ಈ ಸದನದ ಮಾಜಿ ಸದಸ್ಯರಾದ ಶ್ರೀ ಕೆ.ಎನ್. ಅಡಿಗರವರು ಈ ವಿಚಾರವನ್ನು ರಿಸರ್ವ್ ಬ್ಯಾಂಕಿನೊಂದಿಗೆ ಚರ್ಚಿಸಿದ್ದಾರೆ. ಬ್ಯಾಂಕಿನ ನಿಯಮಕ್ಕೆ ಸ್ವಲ್ಪ ಬದಲಾವಣೆ ಮಾಡಬೇಕಾಗಬಹುದು. ಇದರಿಂದ ಭ್ರಷ್ಟಾಚಾರ ಮತ್ತು ತೊಂದರೆಯನ್ನು ಶೇಕಡ 90 ಕಡಿಮೆ ಮಾಡಬಹುದಾಗಿದೆ. ದುರಾದೃಷ್ಟವಶಾತ್ ದಳ್ಳಾಳಿಗಳು ಇಂದಿನ ದೊಡ್ಡ ತೊಂದರೆಯಾಗಿದ್ದಾರೆ. ಅವರು ಸಾರ್ವಜನಿಕರು ಮತ್ತು ಅಧಿಕಾರಿಗಳ ನಡುವಿನ ಕೊಂಡಿಯಾಗಿದ್ದಾರೆ. ಲೈಸೆನ್ಸ್ ನೀಡಿಕೆಗೆ ಸಂಬಂಧಿಸಿದಂತೆ ಮಹಾರಾಷ್ಟ್ರ ರಾಜ್ಯದಲ್ಲಿರುವಂತೆ ವ್ಯವಸ್ಥೆಯನ್ನು ಜಾರಿಗೆ ತರಲು ಯೋಚಿಸುತ್ತಿದ್ದೇವೆ.ಡ್ರೈವಿಂಗ್ ಲೈಸೆನ್ಸ್‌ಗಳನ್ನು ಪರೀಕ್ಷೆ ಮತ್ತು ನಿಯಮ ಪಾಲನೆಯಿಲ್ಲದೇ ನೀಡುತ್ತಿರುವುದು ಗಮನಕ್ಕೆ ಬಂದಿದೆ. ನಾವು ಚಾಲನೆ ತರಬೇತಿಗಾಗಿ ಕೆಲವು ಶಾಲೆಗಳನ್ನು ಮತ್ತು ಪಾಲಿಟೆಕ್ನಿಕ್‌ಗಳನ್ನು ಗುರುತಿಸಿ ಅವರಿಂದ ಪ್ರಮಾಣಪತ್ರ ಪಡೆಯುವಂತೆ ವ್ಯವಸ್ಥೆ ಮಾಡಲು ನಿರ್ಧರಿಸಿದ್ದೇನೆ. ಇದು ಸರ್ಕಾರದ ಪರಿಶೀಲನೆಯಲ್ಲಿದೆ. ಹಲವಾರು ಸಂದರ್ಭಗಳಲ್ಲಿ ಅಪಘಾತ ನಿರ್ಲಕ್ಷ ಚಾಲನೆಯಿಂದ ಉಂಟಾಗುತ್ತದೆ. ಕೆಲವೊಮ್ಮೆ ರಸ್ತೆಗಳ ಪರಿಸ್ಥಿತಿಯೂ ಇದಕ್ಕೆ ಕಾರಣವಾಗುತ್ತದೆ.

ಇನ್ನು ಭ್ರಷ್ಟಾಚಾರದ ಬಗ್ಗೆ ನಮ್ಮಲ್ಲಿ ಭ್ರಷ್ಟಾಚಾರದ ಬಗ್ಗೆ ಮಾತನಾಡುತ್ತಾರೆ. ಲಂಚವನ್ನು ನೀಡುವವರು ಇರುವುದರಿಂದ ಲಂಚವನ್ನು ಪಡೆಯುತ್ತಾರೆ. ಲಂಚ ನೀಡುವವರನ್ನು ಹಿಡಿದು ಶಿಕ್ಷಿಸಬೇಕು. ಈ ಖಾತೆಯಲ್ಲಿ ಲಂಚವನ್ನು ಪಡೆಯಲು ಕಾರಣ ಖಾಸಗಿ ಆಪರೇಟರುಗಳು' ಸರಿಯಾಗಿ ಗಾಡಿಯನ್ನು ನಿರ್ವಹಿಸದೇ ತಮ್ಮ ತಪ್ಪನ್ನು ಮುಚ್ಚಿಕೊಳ್ಳಲು ಲಂಚ ನೀಡುತ್ತಾರೆ. 'ಹಣ ಕಂಡರೆ ಹೆಣ ಕೂಡ ಬಾಯಿಬಿಡುತ್ತದೆ' ಸಾವಿರ ರೂಪಾಯಿ ಆಸೆಗೆ ಅಧಿಕಾರಿಗಳು ಬದಲಾಯಿಸುತ್ತಾರೆ. ನಾನು ಭ್ರಷ್ಟ ಅಧಿಕಾರಿಗಳನ್ನು ಸಮರ್ಥಿಸುತ್ತಿಲ್ಲ. ಆದರೆ ಸಾರ್ವಜನಿಕರೇ ಅಧಿಕಾರಿಗಳನ್ನು ಭ್ರಷ್ಟರನ್ನಾಗಿ ಮಾಡುತ್ತಿದ್ದಾರೆ. ಅವರ ಕಾರ್ಯ ಪೂರೈಸಲು ಅವರು ಲಂಚ ನೀಡುತ್ತಾರೆ. ನಾನು ಹೇಳುವುದು ಇಷ್ಟೆ ಕೆಲವಾದರೂ ನಿಯಮಗಳನ್ನು ಪಾಲಿಸಿ ನಮ್ಮ ಕೆಲಸವಾಗಲು ನಾವು ಏನನ್ನಾದರೂ ನೀಡಬೇಕೆಂಬುದನ್ನು ಕೈಬಿಡಿ. ಅದರ ಬದಲು ತೊಂದರೆ ಇದ್ದರೆ ಸರ್ಕಾರ ಅದರ ನಿವಾರಣೆಗೆ ಪ್ರಯತ್ನಿಸುತ್ತದೆ.

ತೆರಿಗೆದಾರರಿಗೆ ಉತ್ತಮ ವ್ಯವಸ್ಥೆ ಕಲ್ಪಿಸಲು ಮಾನ್ಯ ಸದಸ್ಯರು ಹೇಳಿದರು. ಈಗ ನೂತನ ಕಟ್ಟಡವಾಗುತ್ತಿದೆ. ಇದರಿಂದ ತೆರಿಗೆದಾರರಿಗೆ ಉತ್ತಮ ಸೌಲಭ್ಯ ದೊರೆಯಲಿದೆ.

ನಾನು ಎಲ್ಲಾ ಅಂಶಗಳನ್ನು ಉತ್ತರಿಸಿದ್ದೇನೆಂದು ನಂಬಿದ್ದೇನೆ. ಈ ತಿದ್ದುಪಡಿ ವಿಧೇಯಕವನ್ನು ಸರ್ವಾನುಮತದಿಂದ ಅಂಗೀಕರಿಸಬೇಕೆಂದು ಕೋರುತ್ತೇನೆ.

## ಭಾರತ್ ಎಲೆಕ್ಟ್ರಾನಿಕ್ ಲಿಮಿಟೆಡ್ ಆಡಳಿತವರ್ಗದವರಿಂದ ಮೈಸೂರು ರಾಜ್ಯದವರಿಗೆ ಉಂಟಾಗಿದೆ ಎನ್ನಲಾದ ಅನ್ಯಾಯದ ಬಗ್ಗೆ ಚರ್ಚೆ.

ಶ್ರೀ ವೈ.ಎಸ್. ಪಾಟೀಲ್: ಮಾನ್ಯರೇ ನಾನು ಭಾರತ್ ಎಲೆಕ್ಟ್ರಾನಿಕ್ ಲಿಮಿಟೆಡ್ ಮೈಸೂರು ರಾಜ್ಯದವರಿಗೆ ಉಂಟಾಗುತ್ತಿರುವ ಅನ್ಯಾಯದ ಬಗ್ಗೆ ಕಾರ್ಮಿಕ ಸಚಿವರ ಗಮನ ಸೆಳೆಯುತ್ತೇನೆ.

ಶ್ರೀ ಅಜೀಜ್‌ಸೇಟ್: (ಕಾರ್ಮಿಕ ಸಚಿವರು) ಬೆಂಗಳೂರು ನಗರದಲ್ಲಿರುವ ಭಾರತ್ ಎಲೆಕ್ಟ್ರಾನಿಕ್ ಲಿ. ಯು ಕೇಂದ್ರೋದ್ಯಮವಾಗಿದೆ. ಶ್ರೀನಗರದಲ್ಲಿ ಸಭೆ ಸೇರಿದ್ದ ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯ ಸಭೆಯಲ್ಲಿ ರೂ. 500 ಕ್ಕಿಂತ ಕಡಿಮೆ ವೇತನವಿರುವ ಹುದ್ದೆಗಳಿಗೆ ಸ್ಥಳೀಯ ಅಭ್ಯರ್ಥಿಗಳಿಗೆ ಆದ್ಯತೆ ನೀಡಬೇಕೆಂದು ನಿರ್ಧಾರ ಮಾಡಲಾಗಿದೆ. ಆದರಂತೆ ಬಿ.ಇ.ಎಲ್.ನಲ್ಲಿ ಕೂಡ ಸ್ಥಳೀಯ ಉದ್ಯೋಗ ವಿನಿಮಯ ಕೇಂದ್ರದಿಂದಲೇ ಅಭ್ಯರ್ಥಿಗಳ ನೇಮಕಾತಿ ಮಾಡಲಾಗಿದೆ. ತಾಂತ್ರಿಕ ಮತ್ತು ವೈಜ್ಞಾನಿಕ ತರಬೇತು ಹುದ್ದೆಗಳಿಗೆ ನವದೆಹಲಿಯ ಕೇಂದ್ರ ಉದ್ಯೋಗ ವಿನಿಮಯ ಕಛೇರಿಯಿಂದ ಆಯ್ಕೆ ಮಾಡಲಾಗಿದೆ. ಉಳಿದಂತೆ ಪ್ರಮುಖ ಹುದ್ದೆಗಳಿಗೆ ಎಲ್ಲಾ ಪ್ರಮುಖ ಪತ್ರಿಕೆಗಳಲ್ಲಿ ಜಾಹೀರಾತು ನೀಡಿ ಸೂಕ್ತ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ. 1.11.1972ರಲ್ಲಿ ಇರುವಂತೆ ಭಾರತ್ ಎಲೆಕ್ಟ್ರಾನಿಕ್ಸ್‌ನಲ್ಲಿ ಮೈಸೂರು ರಾಜ್ಯದ ಉದ್ಯೋಗಿಗಳ ಸಂಖ್ಯೆ ಈ ರೀತಿ ಇದೆ.

| ಗುಂಪು | ಮೈಸೂರು ರಾಜ್ಯ ಉದ್ಯೋಗಿಗಳು | ಹೊರ ರಾಜ್ಯದವರು | ಒಟ್ಟು | ಮೈಸೂರು ಉದ್ಯೋಗಿಗಳ ಶೇಕಡಾ |
|---|---|---|---|---|
| ಮೂಲ ವೇತನ ರೂ.800-00 ಮತ್ತು ಮೇಲ್ಪಟ್ಟವರು | 315 | 356 | 671 | 46.94 |
| ಮೂಲ ವೇತನ ರೂ. 400-00 ಹೆಚ್ಚು 700-00 ರೂ.ರೊಳಗೆ | 178 | 175 | 353 | 50.42 |
| 400-00 ಕ್ಕಿಂತ ಕಡಿಮೆ ಇರುವ ಮೂಲ ವೇತನ | 8,336 | 3,450 | 11,786 | 70.73 |
| | 8,829 | 3,981 | 12,810 | 68.92 |

ಮೇಲ್ಕಂಡ ಪಟ್ಟಿ ಭಾರತ್ ಎಲೆಕ್ಟ್ರಾನಿಕ್ಸ್‌ನಲ್ಲಿರುವ ಒಟ್ಟು ಉದ್ಯೋಗಿಗಳ ಬಗ್ಗೆ ಮಾಹಿತಿ ನೀಡುತ್ತದೆ. ಸ್ಥಳೀಯರಿಗೆ ಹೆಚ್ಚಿನ ಉದ್ಯೋಗಾವಕಾಶವನ್ನು ಕಲ್ಪಿಸುವುದಕ್ಕೆಂದು ಕೇಂದ್ರ ಸರ್ಕಾರವು ನೇಮಕಾತಿ ಸಮಿತಿಯಲ್ಲಿ ಸ್ಥಳೀಯ ಪ್ರತಿನಿಧಿಗಳನ್ನು ಹೊಂದಿರಲು ಸುತ್ತೋಲೆ ನೀಡಿದೆ. ಈ ವ್ಯವಸ್ಥೆಯಿಂದ ಭಾರತ್ ಎಲೆಕ್ಟ್ರಾನಿಕ್ಸ್‌ನಲ್ಲಿ ಮೈಸೂರು ರಾಜ್ಯದವರ ಹಿತಾಸಕ್ತಿ ಕಾಪಾಡಲು ಅನುಕೂಲವಾಗುತ್ತದೆ.

ವಿಧಾನಸಭೆ: [illegible]-12-1972

ಶ್ರೀ ವೈ.ಎಸ್. ಪಾಟೀಲ್. ಈ ಸ್ಟೇಟ್‌ಮೆಂಟ್‌ನಲ್ಲಿ ಶೇಕಡಾ 70ರಷ್ಟು ಸ್ಥಳೀಯ ಉದ್ಯೋಗಿಗಳು ಇದ್ದಾರೆಂದು ಹೇಳಿದೆ. ಇದು ಸತ್ಯಕ್ಕೆ ದೂರವಾದ ಸಂಗತಿ. ಇದನ್ನು ಮತ್ತೆ ಪರಿಶೀಲನೆ ಮಾಡಬೇಕು. ರಾಜ್ಯಕ್ಕೆ ಆಗುತ್ತಿರುವ ಅನ್ಯಯ ತಪ್ಪಿಸಲು ರಾಜ್ಯದ ಐ.ಎ.ಎಸ್. ಅಧಿಕಾರಿಯೊಬ್ಬರನ್ನು ಚೀಫ್ ಅಡ್ಮಿನಿಸ್ಟ್ರೇಟಿವ್ ಆಫೀಸರ್ ಆಗಿ ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಈ ಸ್ಟೇಟ್‌ಮೆಂಟ್ ಸತ್ಯಕ್ಕೆ ದೂರವಾದುದಲ್ಲ. ಸತ್ಯಕ್ಕೆ ಹತ್ತಿರವಾದುದು. ಚೀಫ್ ಅಡ್ಮಿನಿಸ್ಟ್ರೇಟಿವ್ ಆಫೀಸರನ್ನು ಅಪಾಯಿಂಟ್ ಮಾಡಬೇಕೆಂದು ಮಾನ್ಯ ಸದಸ್ಯರು ಹೇಳಿದ್ದಾರೆ. ಈಗ ಸೆಲೆಕ್ಷನ್ ಕಮಿಟಿಗೆ ನಮ್ಮ ಡೈರೆಕ್ಟರ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್‌ರನ್ನು ನೇಮಕ ಮಾಡಿದ್ದೇವೆ. ಹೆಂಗಸರನ್ನು ಕೆಲಸಕ್ಕೆ ತೆಗೆದುಕೊಳ್ಳಲು ಇಷ್ಟೆ ಎತ್ತರ ಇರಬೇಕೆಂದು ನಿಯಮ ಮಾಡಿದ್ದರು. ನಮ್ಮ ರಾಜ್ಯದ ಹೆಂಗಸರು ಸ್ವಲ್ಪ ಕುಳ್ಳ ಆದ್ದರಿಂದ ಕೇರಳ ಮತ್ತು ತಮಿಳುನಾಡಿನವರೇ ಆಯ್ಕೆಯಾಗುತ್ತಿದ್ದರು. ಇನ್ನು ಮುಂದೆ ಈ ರೀತಿ ಅನ್ಯಾಯವಾಗದಂತೆ ನೋಡಿಕೊಳ್ಳುತ್ತೇವೆ. ಇನ್ನು ಮುಂದೆ ಬಿ.ಇ.ಎಲ್. ಆಗಲಿ ಇತರೇ ಕೇಂದ್ರೋದ್ಯಮವಾಗಲಿ ಶ್ರೀನಗರದಲ್ಲಿ ತೆಗೆದುಕೊಂಡ ನಿರ್ಣಯದಂತೆ ಸ್ಥಳೀಯ ಜನರನ್ನೇ ಉದ್ಯೋಗ ವಿನಿಮಯ ಕೇಂದ್ರಗಳ ಮುಖಾಂತರ ನೇಮಕ ಮಾಡಬೇಕೆಂದು ಕೋರುತ್ತೇವೆ. ಅದನ್ನೇ ಇಂಪ್ಲಿಮೆಂಟ್ ಮಾಡಲು ಹೇಳಿದ್ದೇವೆ. ಅದರಂತೆ ಅವರು ಮಾಡುತ್ತಿದ್ದಾರೆ. ಏನಾದರೂ ಅನ್ಯಾಯವಾಗಿರುವುದು ನಮ್ಮ ಗಮನಕ್ಕೆ ತಂದರೆ ಅದನ್ನು ಸರಿ ಮಾಡುತ್ತೇನೆ.

ಶ್ರೀ ವೈ.ಎಸ್. ಪಾಟೀಲ್: ಒಂದು ಅನ್ಯಾಯದ ವಿಚಾರವನ್ನು ತಮ್ಮ ಗಮನಕ್ಕೆ ತರುತ್ತೇನೆ. ಹರಿಜನ, ಗಿರಿಜನ ಸಮುದಾಯಕ್ಕೆ ಸೇರಿದ ಮಧುರನಾಥ ಮತ್ತು ಸಾರಂಗಪಾಣಿಯವರು ಮೂರು ಬಾರಿ ಸಂದರ್ಶನಕ್ಕೆ ಹೋದರೂ ರಿಜೆಕ್ಟ್ ಆಗಿದ್ದಾರೆ. ಈ ವಿಷಯ ತಾವು ಗಮನಿಸಿದಿರಾ?

ಶ್ರೀ ಅಜೀಜ್‌ಸೇಟ್: ಸರಿಯಾದ ಅರ್ಹತೆಯಿದ್ದು ತಿರಸ್ಕೃತಗೊಂಡಿದ್ದರೆ ಅದಕ್ಕೆ ರೆಪ್ರೆಸೆಂಟೇಷನ್ ಕೊಡಿ, ಕೇಂದ್ರ ಸರ್ಕಾರದವರೆಗೂ ತೆಗೆದುಕೊಂಡು ಹೋಗುತ್ತೇನೆ.

ಶ್ರೀ **ಗೋವಿಂದ ಪಿ. ಒಡೆಯರಾಜ್**: ಮಾನ್ಯ ಮಂತ್ರಿಗಳು ಬಿ.ಇ.ಎಲ್. ನಲ್ಲಿ ಶೇಕಡಾವಾರು 70 ಉದ್ಯೋಗಗಳನ್ನು ರಾಜ್ಯದ ಜನರಿಗೆ ಕೊಡುತ್ತಾರೆಂದು ತಿಳಿಸಿದರು. ಇದರಲ್ಲಿ ಎಕ್ಸಿಕ್ಯೂಟಿವ್ ಅಧಿಕಾರಿಗಳಿಗೂ ಅವಕಾಶ ಕೊಡಲು ಪ್ರಯತ್ನ ಮಾಡಿದ್ದಾರೆಯೇ? ಮೈಸೂರಿನ ಸೀನಿಯರ್ ಅಧಿಕಾರಿಯವರಿಗೆ ಬಡ್ತಿ ನೀಡದೆ ಅನ್ಯಾಯವಾಗಿದೆ.

ಶ್ರೀ ಅಜೀಜ್‌ಸೇಟ್: ಎಲ್ಲಿ ಅನ್ಯಾಯವಾಗಿದೆಯೋ ಅಲ್ಲಿ ಸರಿಪಡಿಸಲಾಗುವುದು ಎಂದು ನಾನು ಮೊದಲೇ ಹೇಳಿದ್ದೇನೆ. ಬಿ.ಇ.ಎಲ್. ನಮ್ಮ ಹಿಡಿತದಲ್ಲಿ ಇಲ್ಲ ಅದು ಕೇಂದ್ರೋದ್ಯಮ. ಆದ್ದರಿಂದ ತೀವ್ರವಾದ ಅನ್ಯಾಯವಾಗಿದ್ದರೆ ಆ ಬಗ್ಗೆ ಗಮನಿಸಲಾಗುವುದು ವಿನಃ ವ್ಯಕ್ತಿಶಃ ಅಲ್ಲ.

ಶ್ರೀ ಮಳ್ಳೂರು ಆನಂದರಾವ್: ಮೈಸೂರಿನವರೆಂದು ಹೇಗೆ ನಿಗದಿ ಮಾಡುತ್ತೀರಿ?

ಶ್ರೀ ಅಜೀಜ್ ಸೇಟ್: ಐದು ವರ್ಷ ರಾಜ್ಯದಲ್ಲಿದ್ದರೆ ಅವರು ರಾಜ್ಯದವರೆಂದು ಡಾಮಿಸೈಲ್ ಸರ್ಟಿಫಿಕೇಟ್ ಸಿಗುತ್ತದೆ. ಮೈಸೂರಿನವರೆಂಬ ಹಕ್ಕು ಬರುತ್ತದೆ. ಇದಲ್ಲದೆ ಸ್ಕೂಲ್ ಸರ್ಟಿಫಿಕೇಟ್, ಬರ್ತ್ ಸರ್ಟಿಫಿಕೇಟ್ ಇವುಗಳ ಆಧಾರದ ಮೇಲೆ ನಿರ್ಧಾರ ಮಾಡುತ್ತಾರೆ.

ಶ್ರೀ ಎಂ.ಸಿ. ಪೆರುಮಾಳ್: ಕೆಲವರು ಎಂ.ಪಿ. ಅಥವಾ ಎಂ.ಎಲ್.ಎ ಇಂದ ಅವರ ವಿಳಾಸ ನೀಡಿ ರಿಜಿಸ್ಟರ್ ಮಾಡಿರುತ್ತಾರೆ. ಆದ್ದರಿಂದ ಪ್ರೈಮರಿ ಶಾಲೆಯಿಂದ ಯೂನಿವರ್ಸಿಟಿಯವರೆಗೆ ಕಲಿತಿದಿದ್ದರೆ ಮಾತ್ರ ಅಂತಹವರಗೆ ಇಂತಹ ಕೈಗಾರಿಕೆಗಳಲ್ಲಿ ಆದ್ಯತೆ ನೀಡಬೇಕು.

ಶ್ರೀ ಅಜೀಜ್ ಸೇಟ್: ಪ್ರೈಮರಿ ಶಾಲೆಯಿಂದ ಯೂನಿವರ್ಸಿಟಿಯವರೆಗೆ ಕಲಿತಿರಬೇಕೆಂದು ಹೇಳಿದರು. ಇದರ ಅವಶ್ಯಕತೆಯೇನೂ ಇಲ್ಲ. ಇದೆಲ್ಲ ನೇಮಕ ನಾವು ಮಾಡುವುದಿಲ್ಲ. ಕೇಂದ್ರದಿಂದ ಆಗುತ್ತದೆ. ಈ ಸಂದರ್ಭದಲ್ಲಿ ನಮ್ಮ ಯುವಕರ ಬಗ್ಗೆ ಹೇಳುವುದಾದರೆ ಉದ್ಯೋಗ ವಿನಿಮಯ ಕಛೇರಿಯಲ್ಲಿ ನೋಂದಣಿ ಮಾಡುವಾಗ ಸರಿಯಾಗಿ ವಿವರಗಳನ್ನು ಕೊಡುವುದಿಲ್ಲ ಮತ್ತು ಅರ್ಜಿಗಳನ್ನು ಸರಿಯಾಗಿ ಭರ್ತಿ ಮಾಡುವುದಿಲ್ಲ. ಇಂಟರ್‌ವ್ಯೂಗೆ ಕರೆದರೆ ಹಾಜರಾಗುವುದಿಲ್ಲ. ಇಂತಹ ದಿನ ಕಡೇ ದಿನ ಎಂದಿದ್ದರೂ ಸರಿಯಾಗಿ ಅರ್ಜಿ ಕಳುಹಿಸುವುದಿಲ್ಲ. ಇಂತಹ ಅವ್ಯವಸ್ಥೆಗಳಿರುವಂಥಾ ಅರ್ಜಿಗಳೇ ನಮ್ಮ ಹತ್ತಿರ ಹಾಗೂ ಎಂ.ಎಲ್.ಎ.ಗಳ ಹತ್ತಿರ ಬರುತ್ತವೆ. We have to accuse ourselves. We should desist from giving such certificate

## ಪ್ರಶ್ನೋತ್ತರಗಳು

### (1) ಪ್ರವಾಸಿ ತಾಣಗಳ ಅಭಿವೃದ್ಧಿಯ ಬಗ್ಗೆ ನಡೆದ ಚರ್ಚೆ.

ದಿನಾಂಕ: 14ನೇ ಏಪ್ರಿಲ್ 1972

ಶ್ರೀ ಬಿ.ಎಸ್. ವಿಶ್ವನಾಥ್: ರಾಜ್ಯ ಸರ್ಕಾರ ಪ್ರವಾಸಿ ತಾಣಗಳಾದ ಆಗುಂಬೆ ಮತ್ತು ಅಂಬುತೀರ್ಥಗಳ ಅಭಿವೃದ್ಧಿಗೆ ಯಾವ ಕ್ರಮ ಕೈಗೊಂಡಿದೆ? ಜಗತ್ಪ್ರಸಿದ್ಧ ಜೋಗ್ ಜಲಪಾತದಲ್ಲಿ ಪ್ರವಾಸಿಗರಿಗೆ ಅನುಕೂಲವಿಲ್ಲದಿರುವ ಬಗ್ಗೆ ಗಮನಕ್ಕೆ ಬಂದಿದೆಯೆ?

ಶ್ರೀ ಅಜೀಜ್ ಸೇಟ್ (ಕಾರ್ಮಿಕ ಖಾತೆ ಸಚಿವರು): 1971-74ರ ಯೋಜನೆಯಂತೆ ಕರ್ನಾಟಕ ಪ್ರವಾಸೋದ್ಯಮ ಇಲಾಖೆಯು ಆಗುಂಬೆಯನ್ನು ಪ್ರವಾಸಿ ತಾಣವಾಗಿ ಅಭಿವೃದ್ಧಿಗೊಳಿಸಲು ಕಾರ್ಯರಂಭ ಮಾಡಿದೆ. ಅಂಬುತೀರ್ಥ ಧಾರ್ಮಿಕ ಸ್ಥಳವಾಗಿದ್ದು, ಹೆಚ್ಚು ಪ್ರವಾಸಿಗರನ್ನು ಸೆಳೆಯದ ಕಾರಣ ಸದ್ಯದಲ್ಲಿ ಅಂಬುತೀರ್ಥದ ಅಭಿವೃದ್ಧಿ ಸಾಧ್ಯವಿಲ್ಲ. ಜೋಗದಲ್ಲಿ ಪ್ರವಾಸಿಗಳಿಗಾಗಿ ಉತ್ತಮ ವ್ಯವಸ್ಥೆ ಕಲ್ಪಿಸಲಾಗುತ್ತಿದೆ.

ಶ್ರೀ ಬಿ.ಎಸ್. ವಿಶ್ವನಾಥ್: 1971-74ರ ತನಕ ಆಗುಂಬೆಯ ಅಭಿವೃದ್ಧಿ ಮಾಡುತ್ತೀರಾ ಇದು 71ರಲ್ಲಿ ಆಗುತ್ತದೋ ಅಥವಾ 74ರಲ್ಲಿ ಆಗುತ್ತದೋ ಗೊತ್ತಿಲ್ಲ ಅಲ್ಲವೇ?

ಶ್ರೀ ಅಜೀಜ್‌ಸೇಟ್: ಈ ಸ್ಕೀಮು 1971-74ಕ್ಕೆ ಸಂಬಂಧಿಸಿದ್ದು ಈಗ ಚಾಲ್ತಿಯಲ್ಲಿದೆ.

ಶ್ರೀ ಬಿ.ಎಸ್. ವಿಶ್ವನಾಥ್: ಆಗುಂಬೆಯ ಬಳಿ ಇನ್ನೆರಡು ಪ್ರೇಕ್ಷಣೀಯ ಸ್ಥಳಗಳಲ್ಲಿ ಪ್ರವಾಸಿ ಮಂದಿರ ಕಟ್ಟುವ ಯೋಜನೆಯಿದೆಯೆ?

ಶ್ರೀ ಅಜೀಜ್‌ಸೇಟ್: I want notice.

ಶ್ರೀ ಟಿ.ಎನ್. ನರಸಿಂಹಮೂರ್ತಿ: ಜೋಗದಲ್ಲಿ ಉತ್ತಮ ವ್ಯವಸ್ಥೆ ಕಲ್ಪಿಸಲಾಗಿದೆ ಎಂದು ಉತ್ತರ ಕೊಟ್ಟಿದ್ದಾರೆ. ಇವತ್ತು ಐತಿಹಾಸಿಕವಾದ ಇಡೀ ವಿಶ್ವವನ್ನೇ ಆಕರ್ಷಿಸುವ ಜೋಗದಲ್ಲಿ ಪ್ರವಾಸಿಗರಿಗೆ ವಸತಿ ಸೌಲಭ್ಯವಿಲ್ಲ. ಭೋಜನ ಗೃಹಗಳ ಸೌಲಭ್ಯವೂ ಇಲ್ಲ. ಅಲ್ಲಿ ಇನ್ನು ಹೆಚ್ಚಿನ ಸೌಲಭ್ಯಬೇಕು ಇದಕ್ಕೆ ಉತ್ತರ ಬೇಕು.

ಅಜೀಜ್‌ಸೇಟ್: ಸದ್ಯಕ್ಕೆ ಅಲ್ಲಿ ಒಂದು ಪ್ರವಾಸಿ ಬಂಗಲೆ ಮತ್ತು ಫಾರೆಸ್ಟ್ ಲಾಡ್ಜ್ ಇದೆ. ಒಟ್ಟು 2.5 ಕೋಟಿ ವೆಚ್ಚದ ಯೋಜನೆ ಸಿದ್ಧವಿದ್ದು ಈಗ ನಾವು 1.5 ಲಕ್ಷ ಕಾರ್ಯ ಆರಂಭಿಸಿದ್ದೇವೆ. ಇದರಲ್ಲಿ ವಿಶ್ರಾಂತಿಗೃಹ, ವಾಚ್‌ಟವರ್, ಟೆಲಿಸ್ಕೋಪನ್ನು 1.5 ಲಕ್ಷ ವೆಚ್ಚದಲ್ಲಿ ಆರಂಭಿಸಿದ್ದೇವೆ.

ಶ್ರೀ ಕೇಶವರಾವನಿಟ್ಟೂರ್‌ಕರ್: ಸರ್ಕಾರ ಜೋಗದಲ್ಲಿ ಉತ್ತಮ ವ್ಯವಸ್ಥೆ ಇಲ್ಲವೆಂಬುದನ್ನು ಒಪ್ಪುತ್ತದೆಯೆ?

ಶ್ರೀ ಅಜೀಜ್‌ಸೇಟ್: ನಾನು ಒಪ್ಪುತ್ತೇನೆ. ಜೋಗ್‌ಜಲಪಾತ ಟ್ಯೂರಿಸ್ಟ್ ಡೆವಲಪ್‌ಮೆಂಟ್ ಕಾರ್ಪೋರೇಷನ್‌ನ ವ್ಯಾಪ್ತಿಗೆ ಬರುವುದಿಲ್ಲ. ಸಧ್ಯದಲ್ಲಿ ಅಲ್ಲಿ ಪ್ರವಾಸಿಮಂದಿರ ಮತ್ತು ಫಾರೆಸ್ಟ್ ಲಾಡ್ಜ್ ಇದೆ. ಇದು ಸಾಕಾಗುತ್ತಿಲ್ಲ. ಇದೊಂದು ಪ್ರೇಕ್ಷಣೀಯ ಸ್ಥಳವಾಗಿದ್ದು ಪ್ರವಾಸಿಗಳು ಹೆಚ್ಚಿನ ಸಂಖ್ಯೆಯಲ್ಲಿ ಹೋಗುತ್ತಾರೆ. ಆದ್ದರಿಂದಲೇ ಸರ್ಕಾರ 2.5 ಕೋಟಿ ರೂ.ಗಳ ಯೋಜನೆ ಸಿದ್ಧಪಡಿಸಿದೆ ಮತ್ತು ಅದನ್ನು ಹಂತ ಹಂತವಾಗಿ ಜಾರಿಗೆ ತರಲಾಗುವುದು. ಪ್ರವಾಸೋದ್ಯಮ ಇಲಾಖೆಯು ಹೆಚ್ಚಿನ ಹಣವಿಲ್ಲದ ಪ್ರಯುಕ್ತ ನಿಧಾನವಾಗಿ ಕಾರ್ಯ ಮಾಡಬೇಕಾಗಿದೆ. ಸರ್ಕಾರ ಶೀಘ್ರದಲ್ಲಿ ಪ್ರವಾಸಿಗಳಿಗೆ ಬೇಕಾದ ಎಲ್ಲಾ ಸೌಲಭ್ಯಗಳನ್ನು ಕಲ್ಪಿಸಲಾಗುತ್ತದೆಯೆಂದು ಭರವಸೆ ನೀಡುತ್ತೇನೆ.

ಶ್ರೀ ಎಂ.ಸಿ. ಬಸಪ್ಪ: ಮಾನ್ಯ ಸಚಿವರು ಜೋಗಕ್ಕೆ ಭೇಟಿ ನೀಡಿ ಅಲ್ಲಿರುವ ಪರಿಸ್ಥಿತಿಯನ್ನು ಗಮನಿಸಿ, ಸೌಕರ್ಯಗಳನ್ನು ಉತ್ತಮಪಡಿಸಲು ಮತ್ತು ಅದನ್ನು ಮತ್ತಷ್ಟು ಆಕರ್ಷಣೀಯವಾಗಿಸಲು ಪ್ರಯತ್ನಿಸುವುದು ಸಾಧ್ಯವಿಲ್ಲವೆ?

ಅಜೀಜ್‌ಸೇಟ್: ನಾನು ಜೋಗ ಜಲಪಾತವನ್ನು ಹಲವಾರು ಬಾರಿ ನೋಡಿದ್ದೇನೆ. ಇಲ್ಲಿರುವ ಸಮಸ್ಯೆಯೆಂದರೆ, ಜೋಗ ವಿದ್ಯುಚ್ಛಕ್ತಿ ಮಂಡಲಿಯವರ ಅಧೀನದಲ್ಲಿದ್ದು, ಅವರು ಅದನ್ನು ಪ್ರವಾಸೋದ್ಯಮ ಇಲಾಖೆಗೆ ವಹಿಸಲು ಸಿದ್ಧರಿಲ್ಲ. ನಾವು ಇದನ್ನು ಪ್ರವಾಸೋದ್ಯಮ ಇಲಾಖೆಗೆ ವಹಿಸಲು ಪ್ರಯತ್ನಿಸುತ್ತಿದ್ದೇವೆ. ಇಲ್ಲಿನ ಸದಸ್ಯರ ಅಭಿಪ್ರಾಯವನ್ನು ಪಡೆದುಕೊಂಡು ಸರ್ಕಾರ ಇದನ್ನು ಪ್ರವಾಸೋದ್ಯಮ ಇಲಾಖೆಗೆ ವಹಿಸಿಕೊಡುತ್ತದೆ ಎಂದು ನಂಬಿದ್ದೇನೆ.

ಶ್ರೀ ಎಂ.ಸಿ. ಬಸಪ್ಪ: ಪ್ರವಾಸಿ ತಾಣಗಳನ್ನು ಗುರುತಿಸಲು ಪ್ರವಾಸೋದ್ಯಮ ಇಲಾಖೆ ಅನುಸರಿಸುವ ಮಾರ್ಗ ಸೂಚಿ ಯಾವುದು?

ಶ್ರೀ ಅಜೀಜ್‌ಸೇಟ್: ಸಾಮಾನ್ಯವಾಗಿ ಪ್ರವಾಸಿ ತಾಣವಾಗಿ ಗುರುತಿಸಲು ಅಲ್ಲಿ ಆಕರ್ಷಕ ಪ್ರಕೃತಿ, ಸಂಗಮ, ಪರ್ವತ, ಕಾಡು, ನೈಸರ್ಗಿಕ ಸೌಂದರ್ಯ, ವಿಶ್ರಾಂತಿಧಾಮಗಳಾಗಿರಬೇಕು.

ಶ್ರೀ ಗೋವಿಂದ ಪಿ. ಒಡೆಯರಾಜ್: ಸ್ನಾನ ಗೃಹಗಳಿಲ್ಲದ ವಸತಿ ರೂಮುಗಳಿದೆಯೆಂಬ ಬಗ್ಗೆ ಸರ್ಕಾರಕ್ಕೆ ತಿಳಿದಿದೆಯೇನು?

ಶ್ರೀ ಅಜೀಜ್‌ಸೇಟ್: ಆ ರೀತಿ ಇಲ್ಲ. ಇದು ಕೇವಲ ಉತ್ಪ್ರೇಕ್ಷೆ. ಸ್ನಾನ ಗೃಹವಿಲ್ಲದೇ ರೂಮೂ ಇರುವುದಿಲ್ಲ. ಅಡುಗೆಕೋಣೆ ಇಲ್ಲದೇ ಭೋಜನಗೃಹವಿರುವುದಿಲ್ಲ. ಬಾತ್ ರೂಂಗಳಿಲ್ಲದ ರೂಮುಗಳ ಬಗ್ಗೆ ನನಗೆ ತಿಳಿಸಿದರೆ ನಾನು ಸೂಕ್ತ ಕ್ರಮ ತೆಗೆದುಕೊಳ್ಳುತ್ತೇನೆ.

ಶ್ರೀಮತಿ ಆಕ್ಸೇವಿಯಾ ಅಲ್ಬುಕರ್ಕ್: ಪ್ರವಾಸಿ ಮಂದಿರಗಳೂ ಫಾರೆಸ್ಟ್ ಬಂಗಲೆಗಳೂ, ಕೇವಲ ಶ್ರೀಮಂತ ವರ್ಗದವರಿಗೆ ಇರುತ್ತದೆ. ಸಾಮಾನ್ಯ ಜನರ ವಸತಿಗೆ ಯಾವುದೂ ದೊರೆಯುವುದಿಲ್ಲ. ಪ್ರದೇಶಗಳಿಗೆ ಸಾಮಾನ್ಯರೂ ಭೇಟಿ ಕೊಡುತ್ತಾರೆ. ಆದ್ದರಿಂದ ಇದರ ಬಗ್ಗೆ ಯಾವ ಕ್ರಮ ತೆಗೆದುಕೊಂಡಿದ್ದೀರಾ?

ಶ್ರೀ ಅಜೀಜ್‌ಸೇಟ್: ನಾವು ಸಮಾಜವಾದಿಗಳು, ಶ್ರೀಮಂತರು ಮತ್ತು ಸಾಮಾನ್ಯರಿಗೆ ಸಮಾನ ಸೌಕರ್ಯ ದೊರೆಯುವಂತೆ ಮಾಡಲು ಸಲಹೆಗಳನ್ನು ಸ್ವೀಕರಿಸುತ್ತೇವೆ. ಈಗ ಕೆ.ಆರ್.ಎಸ್. ನಲ್ಲಿ ವಸತಿ ಗೃಹಗಳಲ್ಲಿದ್ದು ಅದು ಸಾಮಾನ್ಯ ಜನರಿಗೆ ಕನಿಷ್ಠ ದರ ಪಾವತಿಸಿದರೆ ದೊರೆಯುತ್ತದೆ.

ಶ್ರೀಮತಿ ಆಕ್ಸೇವಿಯಾ ಅಲ್ಬುಕರ್ಕ್: ನಾನು ಕೆ.ಆರ್.ಎಸ್. ಬಗ್ಗೆ ಹೇಳುತ್ತಿಲ್ಲ, ಜೋಗ್ ಮತ್ತು ಆಗುಂಬೆ ಬಗ್ಗೆ ಕೇಳುತ್ತಿದ್ದೇನೆ. ಅಲ್ಲಿ 30-35 ರೂ. ಬಾಡಿಗೆಯಿದ್ದು, ಅದನ್ನು ಸಾಮಾನ್ಯರು ನೀಡಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಈ ಬಗ್ಗೆ ಪ್ರವಾಸೋದ್ಯಮ ಇಲಾಖೆಯ ಯೋಜನೆಗಳೇನು?

ಶ್ರೀ ಎಂ.ಎಸ್. ಸತ್ಯನಾರಾಯಣರಾವ್: ಸರ್ಕಾರದಲ್ಲಿ ಈ ಕಾರ್ಯಗಳಿಗೆ ಹಣವಿಲ್ಲದಿದ್ದರೆ ಕನಿಷ್ಠ ಮಂತ್ರಿಗಳು ಭೇಟಿ ಮಾಡಿದಾಗ ಒಳ್ಳೆಯ ವ್ಯವಸ್ಥೆ ಮಾಡುವ ಬಗ್ಗೆ ಯೋಚಿಸಿ. ಏಕೆಂದರೆ ಅವರು ಜನಸಾಮಾನ್ಯರ ಪ್ರತಿನಿಧಿಗಳು.

ಶ್ರೀ ಅಜೀಜ್‌ಸೇಟ್: ಈ ಸಲಹೆಯಂತೆ ನಾವು ಹೋಗುವಾಗ ಮಾನ್ಯ ಸದಸ್ಯರನ್ನೂ ಕರೆದೊಯ್ಯುತ್ತೇವೆ.

(ಸಭೆಯಲ್ಲಿ ನಗು)

ಶ್ರೀ ಜಿ.ವಿ. ಗೌಡ: ಪ್ರವಾಸೋದ್ಯಮ ಇಲಾಖೆಯು ಪ್ರವಾಸ ಅಭಿವೃದ್ಧಿ ನಿಗಮವಾಗಿ ಬದಲಾವಣೆಯಾದ ಕಾರಣವೇನು? ಅದರ ಆರ್ಥಿಕ ಪರಿಸ್ಥಿತಿ ತಿಳಿಸುತ್ತೀರಾ?

ಶ್ರೀ ಅಜೀಜ್‌ಸೇಟ್: ಇದೊಂದು ಸರ್ಕಾರದ ನೀತಿ ನಿರ್ಧಾರ. ಆರ್ಥಿಕ ಪರಿಸ್ಥಿತಿ ಕುರಿತಂತೆ ಉತ್ತರಿಸಲು ನೋಟೀಸ್‌ನ ಅವಶ್ಯಕತೆಯಿದೆ.

ಶ್ರೀ ಕೆ. ಚೆನ್ನಬಸವನಗೌಡ: ಮಾನ್ಯ ಸಚಿವರು ಎಲ್ಲಾ ಸದಸ್ಯರನ್ನೂ ಪ್ರೇಕ್ಷಣೀಯ ಸ್ಥಳಗಳಿಗೆ ವಿಹಾರಕ್ಕೆಂದು ಕರೆದೊಯ್ಯಬಹುದೆ?

ಶ್ರೀ ಅಜೀಜ್‌ಸೇಟ್: ಪ್ರತಿ ಸದಸ್ಯರಿಗೂ ಎಂ.ಎಸ್.ಆರ್.ಟಿ.ಸಿ.ಯಲ್ಲಿ ಉಚಿತ ಬಸ್‌ಪಾಸ್ ನೀಡಲಾಗಿದೆ. ಸದಸ್ಯರು ಅದನ್ನು ಬಳಸಿಕೊಳ್ಳಬಹುದು. ವೃಥಾ ತೆರಿಗೆದಾರರ ಹಣದ ಪೋಲು ಮಾಡುವುದು ಬೇಡ.

ಶ್ರೀ ಕೆ. ವಿಶ್ವನಾಥ್ ಸ್ವಾಮಿ: ಜೋಗ ಜಲಪಾತ ಅಲ್ಲದೇ ಇತರೆ ಪ್ರವಾಸಿ ಕೇಂದ್ರಗಳ ಅಭಿವೃದ್ಧಿಗೆ ಏನಾದರೂ ಯೋಜನೆ ಸಿದ್ಧವಾಗಿದೆಯೇ?

ಶ್ರೀ ಅಜೀಜ್‌ಸೇಟ್: ಮಾಡಿದೆ. ಅನೇಕ ಪ್ರವಾಸಿ ತಾಣಗಳ ಬಗ್ಗೆ ಏನು ಮಾಡಬೇಕೆಂದು ಮಾಸ್ಟರ್ ಪ್ಲಾನ್ ಮಾಡಿದೆ. ಕೆಲಸ ನಡೆಯಬೇಕಾಗಿದೆ. ಅದಕ್ಕೆ ಅವಕಾಶ, ಅನುಕೂಲ ನೋಡಿ ಹಣದ ಅನುಕೂಲತೆ ನೋಡಿ ಏರ್ಪಾಡು ಮಾಡಬೇಕು.

ಶ್ರೀ ಬಿ.ಎಸ್. ವಿಶ್ವನಾಥ್: ಶರಾವತಿ ಜಗತ್ಪ್ರಸಿದ್ಧ ಕೇಂದ್ರವಾಗಿರುವುದರಿಂದ ಬಹಳ ಜನ ಬರುತ್ತಾರೆ. ಆದರೆ ಅಂಬುತೀರ್ಥ ಪ್ರವಾಸಿ ಕೇಂದ್ರವಾಗುವುದಿಲ್ಲ ಎಂದು ಹೇಳಿದ್ದಾರೆ, ಅಲ್ಲಿ ನೂರಾರು ಜನ ಬರುತ್ತಾರೆ. ಅದರ ಅಭಿವೃದ್ಧಿ ಸಾಧ್ಯವಿಲ್ಲವೆ?

ಶ್ರೀ ಅಜೀಜ್‌ಸೇಟ್: ಅಲ್ಲಿ ದೈವಭಕ್ತರು ಹೋಗಿ ಪೂಜೆ ಮಾಡಬಹುದು. ಪ್ರವಾಸಿಗಳಿಗೆ ಅಟ್ರಾಕ್ಷನ್ ಇಲ್ಲ.

ಶ್ರೀ ಎ.ಹೆಚ್. ಶಿವಾನಂದಸ್ವಾಮಿ: ಸಾವಿರಾರು ಜನ ಪೂಜೆ ಪುನಸ್ಕಾರಗಳಿಗಾಗಿ ಹೋಗುವುದರಿಂದ ಕಡೆಯ ಪಕ್ಷ ಒಂದು ಛತ್ರವನ್ನು ನಿರ್ಮಿಸಲು ಏರ್ಪಾಡು ಮಾಡುತ್ತೀರಾ?

ಶ್ರೀ ಅಜೀಜ್ ಸೇಟ್: ಇಡೀ ದೇಶದಲ್ಲಿ ಮಸೀದಿ, ಚರ್ಚು, ದೇವಸ್ಥಾನ ಎಲ್ಲಾ ಕಡೆಯಲ್ಲೂ ಇವೆ. ಇದರೊಂದಿಗೆ ಪ್ರಾಕೃತಿಕ ಆಕರ್ಷಣೆಯೂ ಇರಬೇಕು. ಈ ಮಸೀದಿ, ಚರ್ಚು ಇತ್ಯಾದಿಗಳ ಬಗ್ಗೆ ಗಮನ ಹರಿಸಲು ಬೇರೆಯ ಇಲಾಖೆ ಇದೆ. ಇದು ನನ್ನ ಅಧೀನಕ್ಕೆ ಬರುವುದಿಲ್ಲ.

ನಿರುದ್ಯೋಗ ಸಮಸ್ಯೆ ಕುರಿತಾದ ಚರ್ಚೆ: (ದಿನಾಂಕ: 27.06.1972)

ಶ್ರೀ ವೈ. ರಾಮಚಂದ್ರ: ರಾಜ್ಯದಲ್ಲಿರುವ ನಿರುದ್ಯೋಗ ನಿವಾರಣೆಗೆ ಸಂಬಂಧಿಸಿದಂತೆ ತೆಗೆದುಕೊಳ್ಳಲಾದ ಕಾರ್ಯಗಳ ಬಗ್ಗೆ ವಿವರ ನೀಡುತ್ತೀರಾ?

ಶ್ರೀ ಅಜೀಜ್‌ಸೇಟ್: ಸರ್ಕಾರವು ನಿರುದ್ಯೋಗ ಸಮಸ್ಯೆಗೆ ಸಂಬಂಧಿಸಿದಂತೆ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ಮಾಹಿತಿಗಳನ್ನು ಸದನದ ಮುಂದೆ ಇರಿಸಿದ್ದೇನೆ.

ಶ್ರೀ ವೈ. ರಾಮಚಂದ್ರ: ನಿರುದ್ಯೋಗದ ಬಗ್ಗೆ ಪ್ರಶ್ನೆ ಕೇಳಿದ್ದಕ್ಕೆ ಹಲವಾರು ಮಾಹಿತಿಗಳನ್ನು ಒದಗಿಸಿದ್ದೀರಿ. ಆದರೆ ಮಹಾರಾಷ್ಟ್ರ ಸರ್ಕಾರದವರು ಮಹಾರಾಷ್ಟ್ರದಲ್ಲಿ ಯಾವುದೇ ಕಾರ್ಖಾನೆಗಳನ್ನು ಕೇಂದ್ರ ಸರ್ಕಾರದವರಾಗಲೀ, ರಾಜ್ಯ ಸರ್ಕಾರದವರಾಗಲಿ ಅಥವಾ ಪ್ರೈವೇಟ್‌ನವರಾಗಲಿ ಸ್ಥಾಪನೆ ಮಾಡಲು ಲೈಸೆನ್ಸ್ ಕೊಡಬೇಕಾದರೆ ಅಲ್ಲಿ ಶೇಕಡ 80 ಉದ್ಯೋಗವನ್ನು ಮಹಾರಾಷ್ಟ್ರದವರಿಗೆ ಕೊಡಬೇಕೆಂದು ಆದೇಶ ಕೊಟ್ಟಿದ್ದಾರೆ. ಇದರಿಂದ ಅಲ್ಲಿ ಈ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಲು ಸಾಧ್ಯವಾಗಿದೆ. ಅದೇ ರೀತಿ ಇಲ್ಲೂ ಏಕೆ ಮಾಡಬಾರದು?

ಶ್ರೀ ಅಜೀಜ್‌ಸೇಟ್: ಈ ಸಲಹೆಯನ್ನು ಗಮನಿಸಲಾಗುವುದು.

ಶ್ರೀ ವೈ. ರಾಮಚಂದ್ರ: ಈ ನಿರುದ್ಯೋಗಿ ಪದವೀಧರರಿಗೆ ಏನಾದರೂ ಅಲೋಯೆನ್ಸ್ ಕೊಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಈ ಸ್ಕೀಮ್‌ನಲ್ಲಿ ಪದವೀದರರಿಗೆ 200 ರೂಪಾಯಿ ಮತ್ತು ಡಿಪ್ಲೋಮಾದಾರರಿಗೆ ರೂ. 100 ಸ್ಟೈಪಂಡ್ ಕೊಡುತ್ತಿದ್ದೇವೆ

ಶ್ರೀ ಎಂ.ಸಿ. ಬಸಪ್ಪ : ತಾವು ನಿರುದ್ಯೋಗಿ ಪದವೀಧರರ ಸಂಖ್ಯೆಯನ್ನು ಕೊಟ್ಟಿದ್ದೀರಿ. ಇಂಥ ಪದವೀಧರರಿಗೆ ತಮ್ಮ ಕಾಲ ಮೇಲೆ ನಿಂತು ಕೊಳ್ಳುವುದಕ್ಕೆ ಸರ್ಕಾರದವರು ಏನಾದರೂ ಒಂದು ಯೋಜನೆಯನ್ನು ಮಾಡಿ ಸಹಾಯ ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಈಗ ಒಟ್ಟು 2,17,888 ಜನರಿಗೆ ಕೆಲಸವನ್ನು ಕೊಟ್ಟಿದ್ದೇವೆ. ಇದರಲ್ಲಿ ಲ್ಯಾಂಡ್ ಆರ್ಮಿಯಲ್ಲಿ 63,213, ತಾಲ್ಲೂಕು ಡೆವಲಪ್‌ಮೆಂಟ್ ಬೋರ್ಡ್‌ನಲ್ಲಿ 22,276, ರೂರಲ್ ವಾಟರ್ ಪ್ರಾಜೆಕ್ಟ್‌ನಲ್ಲಿ 1,30,385 ಅದೇ ರೀತಿ ಸ್ಟೇಟ್ ಪ್ಲಾನ್‌ನಲ್ಲಿ 2,014 ಹೀಗೆ ಒಟ್ಟು 2,17,888 ಜನ ಅನುಕೂಲ ಪಡೆದಿದ್ದಾರೆ.

ಶ್ರೀ ಕೆ. ವಿಶ್ವನಾಥ ಸ್ವಾಮಿ: ವ್ಯವಸಾಯ ಪದವೀಧರರಿಗೆ ಜಮೀನು ಕೊಟ್ಟು ಬ್ಯಾಂಕಿನ ಮೂಲಕ ಸಾಲ ಕೊಡಿಸುತ್ತೇವೆಂದು ಹಿಂದೆ ಹೇಳಿದ್ದರು. ಅಂದ ಮೇಲೆ ಎಷ್ಟು ಜನರಿಗೆ ಆ ರೀತಿ ವ್ಯವಸ್ಥೆ ಮಾಡಿದ್ದೀರಿ.

ಶ್ರೀ ಅಜೀಜ್‌ಸೇಟ್: ಬೇರೆ ಪ್ರಶ್ನೆ ಕೇಳಿದರೆ ಅದಕ್ಕೆ ವಿವರವಾಗಿ ಉತ್ತರ ಹೇಳುತ್ತೇನೆ.

ಶ್ರೀ ಎನ್. ರಾಚಯ್ಯ: ಇಂಜಿನಿಯರಿಂಗ್ ಮೊದಲಾದ ಪದವೀಧರರಿಗೆ ಹಾಗೂ ಡಿಪ್ಲೋಮ ಹೋಲ್ಡರ್‌ಗಳಿಗೆ ವಿದ್ಯಾಭ್ಯಾಸ ಕೊಡುವುದಕ್ಕೆ ಸರ್ಕಾರದವರು ಗ್ಯಾರಂಟಿ ಕೊಡುವುದಲ್ಲದೆ ಮುಂದೆ ಅವರಿಗೆ ಉದ್ಯೋಗಗಳನ್ನು ಕೊಡುವುದಕ್ಕೂ ರಾಜ್ಯಾಂಗದಲ್ಲಿ ಗ್ಯಾರಂಟಿ ಕೊಡಬೇಕೆಂದಿದೆ ಯಾವ ತಂದೆ ತಾಯಿಗಳಿಗೆ 2 ಲಕ್ಷ ರೂಪಾಯಿಗಳ ಮೇಲೆ ಆಸ್ತಿ ಇರುತ್ತದೋ ಅಂತಹವರ ಮಕ್ಕಳಿಗೆ ಸರ್ಕಾರದ ನೌಕರಿಯನ್ನು ನೀಡದಂತೆ ವ್ಯವಸ್ಥೆ ಮಾಡಬೇಕು. ಅದಕ್ಕಿಂತ ಕಡಿಮೆ ಇರುವವರ ಮಕ್ಕಳಿಗೆ ಒಳ್ಳೆಯ ಉದ್ಯೋಗಗಳನ್ನು ಕೊಟ್ಟರೆ ಅವರಿಂದ ದೇಶಕ್ಕೆ ಹೆಚ್ಚು ಪ್ರಯೋಜನವಾಗುತ್ತದೆ. ಈ ರೀತಿ ವ್ಯವಸ್ಥೆಯನ್ನು ಮಾಡಲು ಸರ್ಕಾರದವರು ಪರಿಶೀಲಿಸುತ್ತಾರೆಯೆ?

ಶ್ರೀ ಅಜೀಜ್‌ಸೇಟ್: ಮಾನ್ಯ ಸದಸ್ಯರು ಹೇಳಿದ ಅಭಿಪ್ರಾಯ ಒಳ್ಳೆಯದು ಇದೆ. ದುರಾದೃಷ್ಟದಿಂದ ಡಿಗ್ರಿ ತೆಗೆದುಕೊಂಡ ತಕ್ಷಣ ಅನೇಕರು ಸರ್ಕಾರಿ ನೌಕರಿಗೆ ಕಣ್ಣು ಬಿಡುತ್ತಾರೆ. ಆದರೆ ಸರ್ಕಾರ ಹಾಕಿರತಕ್ಕ ಇಂಡಸ್ಟ್ರಿ ಸ್ಕೀಮುಗಳ ಬಗ್ಗೆ ಬೆನಿಫಿಟ್ ತೆಗೆದುಕೊಂಡಿರುವ ಜನ ಬಹಳ ಕಡಿಮೆ. ಬಡ್ಜೆಟ್‌ನಲ್ಲಿ ನಾನ್‌ಪ್ಲಾನ್‌ಗೋಸ್ಕರ 30 ಲಕ್ಷ ರೂಪಾಯಿಗಳನ್ನು

ಒದಗಿಸಿದ್ದಾರೆ. ಆ 30 ಲಕ್ಷ ರೂಪಾಯಿಗಳ ಜೊತೆಗೆ ಕೇಂದ್ರ ಸರ್ಕಾರದ ಸಹಾಯ ಮುಂದೆ ಬರುತ್ತದೆ. ಆ ರೀತಿ ನಿರುದ್ಯೋಗ ಸಮಸ್ಯೆಯನ್ನು ಕಟ್ ಮಾಡಬೇಕೆಂದು ಪ್ರಯತ್ನ ಮಾಡುತ್ತಿದ್ದೇವೆ.

ಶ್ರೀ ಎಸ್. ರಾಚಯ್ಯ : ಕೆಲವು ಸಂದರ್ಭಗಳಲ್ಲಿ ಬಡವರಾಗಿಲ್ಲದೆ ಇದ್ದರೂ ತಹಸೀಲ್ದಾರರು ಅಂತಹವರಿಗೆ ಸ್ಕಾಲರ್‌ಶಿಪ್ ಕೊಡುವಂತೆ ಸರ್ಟಿಫಿಕೇಟ್ ಕೊಡುತ್ತಾರೆ. ಅವರ ಆರ್ಥಿಕ ಸ್ಥಿತಿ ಯಾವ ರೀತಿ ಇದೆಯೆಂಬ ಅಂಶವನ್ನು ಅದರಲ್ಲಿ ನಮೂದು ಮಾಡುವುದೇ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ನಿಜವಾದ ಬಡವರಿಗೆ ಉದ್ಯೋಗ ಇಲ್ಲದೇ ಹೋಗುತ್ತದೆ. ಯಾರಿಗೆ ಮೆರಿಟ್ ಇರುತ್ತದೋ ಅಂತಹವರಿಗೆ ಅದನ್ನು ಕೊಡುವುದಕ್ಕೆ ಪರಿಶೀಲನೆ ಮಾಡುತ್ತೀರಾ?

ಶ್ರೀ **ಅಜೀಜ್‌ಸೇಟ್**: ಮಹಾರಾಷ್ಟ್ರ ಮತ್ತು ಆಂಧ್ರದಲ್ಲಿ ಒಂದು ಕುಟುಂಬದಲ್ಲಿ ಒಬ್ಬನಿಗೆ ಸರ್ಕಾರಿ ನೌಕರಿ ಎಂಬ ಯೋಜನೆಯನ್ನು ಮಾಡಲು ಯೋಜನೆ ಇಟ್ಟುಕೊಂಡಿದ್ದಾರೆ. ಇದೇ ರೀತಿ ಇಲ್ಲಿ ಮಾಡಬೇಕೆಂದು ಆಲೋಚನೆ ಮಾಡುತ್ತಿದ್ದೇನೆ.

ಶ್ರೀ **ಸಿ.ಎಸ್. ಬಾಲಕೃಷ್ಣಗೌಡ**: ತಮ್ಮ ಸ್ನೇಹಿತರು ಹೇಳಿದ ಹಾಗೆ ಮಹಾರಾಷ್ಟ್ರ ರಾಜಸ್ಥಾನ ಮತ್ತು ಆಂಧ್ರಗಳಲ್ಲಿ ಟೆಕ್ನಿಕಲ್ ಪದವೀಧರರ ಸ್ಥಾನಗಳನ್ನು ಭರ್ತಿ ಮಾಡಲು ಅಲ್ಲಿರುವ ಕೇಂದ್ರ ಮತ್ತು ರಾಜ್ಯದ ಉದ್ಯೋಗ ವಿನಿಮಯ ಕೇಂದ್ರಗಳೊಡನೆ ಸಮಾಲೋಚನೆ ಮಾಡಿ ಸಮಸ್ಯೆ ಬಗೆಹರಿಸುತ್ತಾರೆ. ಇದರಿಂದ ಅಲ್ಲಿ ಶೇಕಡ 80 ನಿರುದ್ಯೋಗ ಸಮಸ್ಯೆ ಬಗೆಹರಿದಿದೆ. ಅಂದಮೇಲೆ ಇಲ್ಲಿಯೂ ಆ ರೀತಿ ಏಕೆ ಮಾಡಬಾರದು?

ಶ್ರೀ **ಅಜೀಜ್‌ಸೇಟ್**: ಎಂಪ್ಲಾಯ್‌ಮೆಂಟ್ ಎಕ್ಸ್‌ಛೇಂಜ್ ಕಾನೂನಿನ ಪ್ರಕಾರ ಆಡಳಿತ ಮಂಡಲಿಯವರು ತಮ್ಮ ಖಾಲಿ ಹುದ್ದೆಗಳನ್ನು ಪ್ರಕಟಿಸಬೇಕೆಂಬ ನಿಯಮವಿದೆ. ಆದರೆ ಅವರು ತಮ್ಮ ಸೂಕ್ತ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಮುಕ್ತರಾಗಿದ್ದಾರೆ. ಕಾರ್ಮಿಕ ಸಚಿವರ ಸಮಾವೇಶದಲ್ಲಿ ನಾವು ಕೇಂದ್ರ ಸರ್ಕಾರವನ್ನು ಉದ್ಯೋಗ ವಿನಿಮಯ ಕಾನೂನಿಗೆ ತಿದ್ದುಪಡಿ ತಂದು ಸರ್ಕಾರಿ ಮತ್ತು ಖಾಸಗಿ ಉದ್ಯೋಗಗಳಲ್ಲಿ ಶೇಕಡ 85-90 ರ ತನಕ ಉದ್ಯೋಗವನ್ನು ಸ್ಥಳೀಯರಿಗೆ ಮೀಸಲಿಡುವ ಬಗ್ಗೆ ಪರಿಶೀಲಿಸಲು ತಿಳಿಸಿದೆ. ತಮ್ಮ ರಾಜ್ಯದಲ್ಲಿ 'ಡಿ' ದರ್ಜೆ ಉದ್ಯೋಗಗಳಿಗೆ ಕೂಡ ಹೊರರಾಜ್ಯಗಳಿಂದ ಬಂದ ಜನರಿಗೆ ಅವಕಾಶ ನೀಡಿರುವ ಉದಾಹರಣೆ ನಮ್ಮಲ್ಲಿದೆ. ಅದರೊಂದಿಗೆ ಹೊರರಾಜ್ಯಗಳಿಂದ ಬಂದವರು ಇಲ್ಲಿಯ ವಿಳಾಸವನ್ನು ನೀಡಿ ಹೆಸರು ನೋಂದಾಯಿಸಿರುತ್ತಾರೆ. ಅವರನ್ನು ಗುರುತಿಸುವುದು ಕಷ್ಟವಾಗುತ್ತಿದೆ.

ಶ್ರೀ **ಸಿ.ಎಸ್. ಬಾಲಕೃಷ್ಣಗೌಡ**: ಹೊರಗಡೆಯಿಂದ ಬರತಕ್ಕ ಜನರು ಕೂಡ ಈ ರಾಜ್ಯದಲ್ಲಿನ ವಿಳಾಸವನ್ನು ಕೊಡುತ್ತಿರುವುದರಿಂದ ಯಾರು ಹೊರಗಿನವರು ಎಂಬುದನ್ನು

ಕಂಡುಹಿಡಿಯುವುದು ಕಷ್ಟವಾಗಿದೆ ಎಂದರು, ಆದರೆ ಅವರು ಅಭ್ಯಾಸ ಮಾಡಿರತಕ್ಕ ಶಾಲಾ ಸರ್ಟಿಫಿಕೇಟ್ ತರಿಸಿದರೆ ಅವರು ಎಲ್ಲಿಯವರು ಎಂದು ತಿಳಿಯುತ್ತದೆ.

ಶ್ರೀ ಅಜೀಜ್ ಸೇಟ್: ನಾನು ಇದನ್ನು ಪರಿಶೀಲಿಸುತ್ತೇನೆ.

ಶ್ರೀಮತಿ ಲೀಲಮ್ಮ ಶಿವನಂಜಪ್ಪ: ಬ್ಯಾಂಕ್‌ಗಳು ಮತ್ತು ಸೊಸೈಟಿಗಳಲ್ಲಿ ನೌಕರರನ್ನು ಕೆಲಸಕ್ಕೆ ತೆಗೆದುಕೊಳ್ಳುವಾಗ ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್‌ನಲ್ಲಿ ರಿಜಿಸ್ಟರ್ ಮಾಡಿರುವವರನ್ನೆ ತೆಗೆದುಕೊಳ್ಳುವಂತೆ ಏರ್ಪಾಡು ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಅದಕ್ಕೆ ಪ್ರಯತ್ನಪಡುತ್ತೇವೆ.

ಶ್ರೀಮತಿ ಆಕ್ಸೇವಿಯಾ ಅಲ್ಬುಕರ್ಕ್: ಮಾನ್ಯ ಸಚಿವರು ವೈ. ರಾಮಚಂದ್ರರವರಿಗೆ ಬೆಂಗಳೂರಿನ ಕಾರ್ಖಾನೆಗಳಲ್ಲಿ ರಾಜ್ಯದವರಿಗೆ ಹೆಚ್ಚಿನ ಉದ್ಯೋಗಾವಕಾಶ ಕಲ್ಪಿಸುವ ಬಗ್ಗೆ ಹೇಳಿದ್ದಾರೆ. ಅದರಂತೆ ಮಂಗಳೂರಿನ ಬಂದರು ಮತ್ತು ಗೊಬ್ಬರ ಕಾರ್ಖಾನೆಯಲ್ಲಿ ರಾಜ್ಯದವರಿಗೆ ಕೆಲಸ ನೀಡುವ ಬಗ್ಗೆ ಮತ್ತು ಉದ್ಯೋಗ ವಿನಿಮಯದಲ್ಲಿ ಹೆಸರು ನೋಂಬಾಯಿಸಿದವರಿಗೆ ಕೆಲಸ ನೀಡುವ ಏರ್ಪಾಡು ಮಾಡಬಹುದೆ?

ಶ್ರೀ ಅಜೀಜ್‌ಸೇಟ್: ಮಾನ್ಯ ಸದಸ್ಯಿಣಿಯವರು ಕೇವಲ ಮಂಗಳೂರು ಜನರ ಬಗ್ಗೆ ಕೇಳದೆ ಇಡೀ ರಾಜ್ಯದ ಬಗ್ಗೆ ಕೇಳಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು ಮತ್ತು ಈ ವಿಷಯವನ್ನು ಕೇಂದ್ರಸರ್ಕಾರದೊಂದಿಗೆ ಚರ್ಚಿಸುತ್ತೇನೆ.

ಶ್ರೀ ವಿ.ಎಸ್. ಕೃಷ್ಣಯ್ಯರ್: ಯಾವ ಆಧಾರದ ಮೇಲೆ ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್‌ನಿಂದ ಆರಿಸಿಕೊಳ್ಳಲಾಗುವುದು? ಪ್ರಿಯಾರಿಟಿ, ಮೆರಿಟ್ ಅಥವಾ ಪ್ರಷರ್ ಮೇಲೆಯೇ?

ಶ್ರೀ ಅಜೀಜ್‌ಸೇಟ್: ಪ್ರಷರ್ ಎಂಬ ಬಗ್ಗೆ ನಾನು ಒಪ್ಪಲಾರೆ. ಉದ್ಯೋಗ ವಿನಿಮಯ ಕೇಂದ್ರದಿಂದ ಮೊದಲು ಪಟ್ಟಿ ಕಳುಹಿಸಲಾಗುವುದು. ಅದನ್ನು ಆಡಳಿತವರ್ಗದವರು ಒಪ್ಪದಿದ್ದರೆ ಎರಡನೇ ಪಟ್ಟಿಗೆ ಬೇಡಿಕೆ ಸಲ್ಲಿಸಬೇಕು. ಸಾಮಾನ್ಯವಾಗಿ ಮೊದಲು ಬಂದವರಿಗೆ ಆದ್ಯತೆ ಎಂಬ ಆಧಾರದ ಮೇಲೆ ನೀಡಲಾಗುತ್ತದೆ.

ಶ್ರೀಮತಿ ಲೀಲಮ್ಮ ಶಿವನಂಜಪ್ಪ: ತುಂಬಾ ಜನ ನಿರುದ್ಯೋಗಿಗಳು ಎಸ್.ಎಸ್.ಎಲ್.ಸಿ ಪಾಸಾದವರಿದ್ದಾರೆ.

ಶ್ರೀ ಅಜೀಜ್‌ಸೇಟ್: ಆದ್ದರಿಂದಲೇ ಕನಿಷ್ಠ ಹುದ್ದೆಗೆ ಎಸ್.ಎಸ್.ಎಲ್.ಸಿ. ಯನ್ನು ಅರ್ಹತೆಯಾಗಿ ನಿಗದಿಪಡಿಸಿದೆ. ನಾವು ನಿರುದ್ಯೋಗದೊಂದಿಗೆ ಸಮರೋಪಾದಿಯಲ್ಲಿ ಹೋರಾಡುತ್ತಿದ್ದೇವೆಂದು ತಿಳಿಸಲು ಇಚ್ಚಿಸುತ್ತೇನೆ.

ಶ್ರೀ ಜಿ.ಪಿ. ವಡೆಯರಾಜ್: ನಿರುದ್ಯೋಗವನ್ನು ನಮ್ಮ ರಾಜ್ಯದಲ್ಲಿ ಯಾವಾಗ ಸಂಪೂರ್ಣವಾಗಿ ಹೊರಪಡಿಸುತ್ತೀರಿ? ಅದಕ್ಕೆ ಏನು ಕ್ರಮ ತೆಗೆದುಕೊಂಡಿದ್ದೀರಿ?

ಶ್ರೀ ಅಜೀಜ್‌ಸೇಟ್: ಇದಕ್ಕೆ ಯಾವ ರೀತಿ ಉತ್ತರ ಕೊಡಬೇಕೋ ಸದಸ್ಯರೇ ಹೇಳಬೇಕು. ತಲೆ ಇರುವವರೆಗೂ ತಲೆನೋವು ಇರುತ್ತದೆ. ಅದಕ್ಕೆ ಔಷಧಿ ಹಾಕಬೇಕು ಅದು ಹೋಗಬೇಕು.

ಪ್ರವಾಸೋದ್ಯಮ ಇಲಾಖೆ ಕುರಿತಾದ ಚರ್ಚೆ: (ದಿನಾಂಕ 30.6.1972)

ಶ್ರೀಮತಿ ಆಕ್ಸೇವಿಯಾ ಅಲ್ಬುಕರ್ಕ್: ಕಾರ್ಮಿಕ ಸಚಿವರು ಉತ್ತರಿಸುವರೆ?

ಎ. ಪ್ರವಾಸೋದ್ಯಮಕ್ಕೆ ಮಾಡಿರುವ ವಾರ್ಷಿಕ ಯೋಜನಾ ಅಂದಾಜು

ಬಿ. ಪ್ರವಾಸೋದ್ಯಮ ಇಲಾಖೆಯಿಂದ ನಡೆಸಲ್ಪಡುವ ಹೋಟೆಲ್‌ಗಳ ಸಂಖ್ಯೆ.

ಸಿ. ರಾಜ್ಯದಲ್ಲಿರುವ 5 ಸ್ಟಾರ್ ಹೋಟಲ್‌ಗಳ ಸಂಖ್ಯೆ

ಶ್ರೀ ಅಜೀಜ್‌ಸೇಟ್:

ಎ. ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆ - 7.00 ಲಕ್ಷ

ಮೈಸೂರು ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮದ ರೂ. 5.00 ಲಕ್ಷ ಶೇರು ಬಂಡವಾಳ.

ಬಿ. ಬೆಂಗಳೂರು ನಗರದಲ್ಲಿ 5 ಸ್ಟಾರ್ ಹೋಟೆಲ್ 1

3 ಸ್ಟಾರ್ ಹೋಟೆಲ್ 3

2 ಸ್ಟಾರ್ ಹೋಟೆಲ್ 2

ಮಂಗಳೂರು ನಗರದಲ್ಲಿ 3 ಸ್ಟಾರ್ ಹೋಟೆಲ್ 1

ಶ್ರೀಮತಿ ಅಕ್ಸೇವಿಯಾ ಆಲ್ಬುಕರ್ಕ್: ನನ್ನ ಪ್ರಶ್ನೆ 237 'ಬಿ' ಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ಯಾವ ಹೋಟೆಲ್ ನಡೆಸಲಾಗುತ್ತಿಲ್ಲವೆಂದು ತಿಳಿಸಿದ್ದಾರೆ. ಮೈಸೂರು ರಾಜ್ಯ ಪ್ರವಾಸೋದ್ಯಮ ಇಲಾಖೆಯಿಂದ ಹೋಟೆಲ್ ನಡೆಸುವ ಇರಾದೆ ಇದೆಯೆ? ಇದರಿಂದ ನಿರುದ್ಯೋಗ ಸ್ವಲ್ಪ ಮಟ್ಟಿಗೆ ಕಡಿಮೆಯಾಗಬಹುದು.

ಶ್ರೀ ಅಜೀಜ್‌ಸೇಟ್: ಸಧ್ಯಕ್ಕೆ ಈ ರೀತಿಯ ಹೋಟೆಲ್‌ನ್ನು ಪ್ರವಾಸ ಇಲಾಖೆಯಿಂದ ನಡೆಸುತ್ತಿಲ್ಲ, ಮುಂದೆ ಕಾಲಕ್ರಮದಲ್ಲಿ ಈ ಬಗ್ಗೆ ಯೋಚಿಸಬಹುದು.

ಶ್ರೀಮತಿ ಅಕ್ಸೇವಿಯಾ ಆಲ್ಬುಕರ್ಕ್: ಆಂತರಿಕ ಹಾಗೂ ವಿದೇಶಿ ಪ್ರವಾಸಿಗಳಿಗಾಗಿ ರಾಜ್ಯ ಪ್ರವಾಸೋದ್ಯಮ ಇಲಾಖೆಯು ಯಾವ ಅನುಕೂಲಗಳನ್ನು ಕಲ್ಪಿಸಿದೆ ಎಂಬ ಬಗ್ಗೆ

ಮಾಹಿತಿ ನೀಡಿ. ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸಿಗಳನ್ನು ಆಕರ್ಷಿಸಲು ಯಾವ ಕ್ರಮ ತೆಗೆದುಕೊಂಡಿದ್ದೀರಿ?

ಶ್ರೀ ಅಜೀಜ್‌ಸೇಟ್: ಪ್ರವಾಸೋದ್ಯಮ ಇಲಾಖೆಯಲ್ಲಿ ಇದಕ್ಕೆಂದೇ ಅಧಿಕಾರಿಗಳು ಇದ್ದಾರೆ. ಅವರಲ್ಲಿ ಮಾರ್ಗದರ್ಶಿಗಳೂ ಇದ್ದಾರೆ. ಅವರು ವಸತಿ ಸೌಲಭ್ಯ, ಟಿಕೇಟು ಖರೀದಿ ಹಾಗೂ ಇತರೆ ವ್ಯವಸ್ಥೆಗಳ ಬಗ್ಗೆ ಲಕ್ಷ್ಯ ವಹಿಸುತ್ತಾರೆ. ಇದು ಸರಿಯಿಲ್ಲವೆಂದು ನಾನು ಒಪ್ಪುತ್ತೇನೆ. ಆದಕ್ಕೆ ನನ್ನ ಉದ್ದೇಶ ಪ್ರವಾಸೋದ್ಯಮ ಇಲಾಖೆಯನ್ನು ಸುಸಜ್ಜಿತಗೊಳಿಸಿ ಈ ಕಾರ್ಯ ಸರಿಯಾಗಿ ನಡೆಯುವಂತೆ ನಿರ್ದೇಶಿಸುವುದಾಗಿದೆ.

ಶ್ರೀಮತಿ ಆಕ್ಟೇವಿಯಾ ಆಲ್ಬುಕರ್ಕ್: ವಿದೇಶಗಳಲ್ಲಿರುವಂತೆ ನಮ್ಮ ಪ್ರೇಕ್ಷಣೀಯ ಸ್ಥಳಗಳಲ್ಲಿ ಉತ್ತಮ ಸೌಲಭ್ಯ ನೀಡಿ ಪ್ರವಾಸಿಗರನ್ನು ಆಕರ್ಷಿಸುವ ಕೆಲಸವನ್ನು ನಮ್ಮ ಸರ್ಕಾರ ಮಾಡುತ್ತದೆಯೆ?

ಶ್ರೀ ಅಜೀಜ್‌ಸೇಟ್: ಮಾನ್ಯ ಸದಸ್ಯೆಯವರ ಪ್ರಶ್ನೆ ನನಗೆ ಆಶ್ಚರ್ಯವನ್ನುಂಟು ಮಾಡುತ್ತಿದೆ. ಭಾರತ ಅಭಿವೃದ್ಧಿಶೀಲ ರಾಷ್ಟ್ರವಾಗಿದ್ದು ಇಲ್ಲಿ ಪ್ರವಾಸಿಗರಿಗೆ ಕೆಲವು ನಿಯಮಗಳಿವೆ. ನಾವು ಅಖಿಲ ಭಾರತ ಶೈಲಿಯನ್ನು ಅನುಸರಿಸಬೇಕು. ಪ್ರವಾಸಿಗರಿಗೆ ಉತ್ತಮ ವ್ಯವಸ್ಥೆ ಕಲ್ಪಿಸಬೇಕು ಎಂಬುದಕ್ಕೆ ನನ್ನ ಸಹಮತ ಇದೆ. ನಮಗೆ ಸಾಧ್ಯವಾಗುವಷ್ಟು ಯೋಜನೆಗಳನ್ನು ಕಾರ್ಯಗತಗೊಳಿಸುತ್ತೇವೆಂದು ಹೇಳಲು ಇಷ್ಟಪಡುತ್ತೇನೆ.

ಶ್ರೀ ಬಿ.ಎಸ್. ವಿಶ್ವನಾಥನ್: ನಮ್ಮ ಪ್ರವಾಸೋದ್ಯಮ ಸಚಿವರು ವಿದೇಶಗಳಿಗೆ ಭೇಟಿಯಿತ್ತು ಅಲ್ಲಿ ನೋಡಿಕೊಂಡು ಬಂದು ಇಲ್ಲಿ ಇದರ ಕಾರ್ಯಗತಮಾಡಲು ಸಾಧ್ಯವಿಲ್ಲವೆ?

ಶ್ರೀ ಅಜೀಜ್‌ಸೇಟ್: ಇದೊಂದು ಉತ್ತಮ ಸಲಹೆ. ಆದರೆ ಇದಕ್ಕಾಗಿ ವಿದೇಶಗಳಿಗೆ ಹೋಗಬೇಕಾದ ಅವಶ್ಯಕತೆ ಕಂಡುಬರುತ್ತಿಲ್ಲ. ಇಲ್ಲೇ ನಮ್ಮ ಯೋಜನೆಗಳಿಗೆ ಅಭಿಪ್ರಾಯ ಸಂಗ್ರಹಿಸಿ ಪ್ರವಾಸೋದ್ಯಮವನ್ನು ಬೆಳೆಸುವ ಬಗ್ಗೆ ಯೋಚಿಸಬೇಕು.

ಶ್ರೀ ಜೆ.ಎಸ್. ಉಲ್ಲಾಳ್: ವಾರ್ತಾ ಖಾತೆ ಹಾಗೂ ಪ್ರವಾಸೋದ್ಯಮ ಇಲಾಖೆಯ ನಡುವೆ ಭಿನ್ನಾಭಿಪ್ರಾಯವಿದೆಯೆಂದು ಕೇಳಿದ್ದೇನೆ. ಅದು ಬಗೆಹರಿಸಲ್ಪಟ್ಟಿದೆಯೆ?

ಶ್ರೀ ಅಜೀಜ್‌ಸೇಟ್: ಈ ರೀತಿಯ ಭಿನ್ನಾಭಿಪ್ರಾಯ ವಾರ್ತಾ ಹಾಗೂ ಪ್ರವಾಸೋದ್ಯಮ ಖಾತೆಗಳಲ್ಲಿ ಇದೆ ಎಂಬ ಬಗ್ಗೆ ನನಗೆ ತಿಳಿಸಿಲ್ಲ. ಈ ಬಗ್ಗೆ ಮಾಹಿತಿ ನೀಡಿದರೆ ಪರಿಶೀಲಿಸಲಾಗುವುದು.

ಶ್ರೀ ಜೆ.ಎ. ಗೌಡ: ಬೆಂಗಳೂರಿನಲ್ಲಿ 5 ಸ್ಟಾರ್ ಹೋಟೆಲ್ ಇರಬೇಕಾದರೆ ಮೈಸೂರಿನಲ್ಲಿ ಏಕೆ ಇಲ್ಲ?

ಶ್ರೀ ಅಜೀಜ್‌ಸೇಟ್: ಇಷ್ಟರಲ್ಲೇ, ಮೈಸೂರಿನಲ್ಲೂ ಬರಲಿದೆ. ಲಲಿತಮಹಲ್ ಅರಮನೆಯಲ್ಲಿ ಅಖಿಲಭಾರತ ಪ್ರವಾಸೋದ್ಯಮ ಇಲಾಖೆಗೆ ವಹಿಸಿಕೊಟ್ಟಿದ್ದು ಅವರು ಅದನ್ನು 5 ಸ್ಟಾರ್ ಹೋಟೆಲ್ ಆಗಿ ಪರಿವರ್ತಿಸಲಿದ್ದಾರೆ.

ಶ್ರೀ ವಿ.ಎಸ್. ಕೃಷ್ಣಯ್ಯರ್: ತಮ್ಮ ಉತ್ತರದಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ಮೂರು ಸ್ಟಾರ್ ಹೋಟೆಲ್‌ಗಳಿವೆ ಎಂದು ಹೇಳಿದ್ದೀರಿ. ಅದರಲ್ಲಿ 5 ಸ್ಟಾರ್ ಯಾವುದು 3 ಸ್ಟಾರ್ ಹೋಟೆಲ್ ಯಾವುದು ಮತ್ತು 2 ಸ್ಟಾರ್ ಹೋಟೆಲ್ ಯಾವುದು?

ಶ್ರೀ ಅಜೀಜ್‌ಸೇಟ್: ಹೋಟೆಲ್ ಅಶೋಕ 5 ಸ್ಟಾರ್, ಹೋಟೆಲ್ ಬೆಂಗಳೂರು ಇಂಟರ್ ನ್ಯಾಷನಲ್, ವೆಸ್ಟ್ ಎಂಡ್, ಸ್ಟೇಲಾಂಗರ್ 3 ಸ್ಟಾರ್, ಮೋತಿಮಹಲ್ ಲಕ್ಸುರಿ ಮಂಗಳೂರಿನಲ್ಲಿ 3 ಸ್ಟಾರ್. ಈ ಸ್ಟಾರ್ ಎನ್ನುವ ಪದ ವಿದೇಶದಿಂದ ಬಂದಿದ್ದು. ಹೋಟೆಲ್ ಒಂದು ಹೆಚ್ಚು ಸುಸಜ್ಜಿತವಾದಷ್ಟೂ ಹೆಚ್ಚು ಸ್ಟಾರ್ ದೊರೆಯುತ್ತವೆ.

ಶ್ರೀ ಜಿ.ಎಸ್. ಉಲ್ಲಾಳ್: ಯುಗೋಸ್ಲಾವಿಯಾದಲ್ಲಿ ಪ್ರವಾಸಿಗಳ ಖರ್ಚು ಬಹಳ ಕಡಿಮೆ ಎಂದು ಕೇಳಿದ್ದೇನೆ.

ಶ್ರೀ **ಅಜೀಜ್‌ಸೇಟ್**: ಅದು ನಿಜ. ವಿದೇಶಿ ಪ್ರವಾಸಿಗಳು ಯಾವಾಗಲೂ ಸೌಲಭ್ಯಗಳನ್ನು ಗಮನಿಸುತ್ತಾರೆ. ಆ ದೇಶಗಳಲ್ಲಿ ಮಟ್ಟ ಬಹಳ ಹೆಚ್ಚು ಆದ್ದರಿಂದ ನಮ್ಮ ಉತ್ತಮ ಮಟ್ಟ ಅವರಿಗೆ ಕನಿಷ್ಠದ್ದಾಗಿ ತೋರುತ್ತದೆ.

ಬಸ್ ನಿಲ್ದಾಣಗಳಲ್ಲಿ ಸದಸ್ಯರು ನೀಡುವ ದೂರುಗಳ ಕುರಿತಾದ ಚರ್ಚೆ.

(ದಿನಾಂಕ 20.7.1972)

ಶ್ರೀ ಬಸವರಾಜ ಕಟ್ಟೀಮನಿ: ಕಾರ್ಮಿಕ ಸಚಿವರು ಉತ್ತರಿಸುವರೇ?

1. ಬಸ್ ನಿಲ್ದಾಣಗಳಲ್ಲಿ ಇರಿಸಿದ ದೂರು ಪುಸ್ತಕದಲ್ಲಿ ನಮೂದಾದ ದೂರುಗಳ ಬಗ್ಗೆ ಸರ್ಕಾರಿ ಕ್ರಮ ತೆಗೆದುಕೊಳ್ಳುವ ಬಗ್ಗೆ.
2. ಆ ಪುಸ್ತಕಗಳಲ್ಲಿ ಸದಸ್ಯರು ನೀಡಿದ ದೂರುಗಳ ಬಗ್ಗೆ ಕ್ರಮ ತೆಗೆದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ?

ಶ್ರೀ ಅಜೀಜ್‌ಸೇಟ್: ದೂರು ಪೆಟ್ಟಿಗೆಯಲ್ಲಿ ನಮೂದಾದ ದೂರುಗಳನ್ನು ಸಂಬಂಧಿಸಿದ ಅಧಿಕಾರಿಗಳಿಗೆ ಮುಂದಿನ ಅಗತ್ಯಕ್ರಮಕ್ಕಾಗಿ ರವಾನಿಸಲಾಗುತ್ತದೆ.

ಶ್ರೀ ಬಸವರಾಜ ಕಟ್ಟೀಮನಿ: ವಿಧಾನಮಂಡಲದ ಸದಸ್ಯರು ನೀಡುವ ದೂರುಗಳು ಸರ್ಕಾರದ ಗಮನಕ್ಕೆ ಬಂದಿದೆಯೆ ಎಂಬ ಬಗ್ಗೆ ಇಲ್ಲವೆಂದು ಹೇಳಿದ್ದೀರಿ. ಅದನ್ನು ಅಧಿಕಾರಿಗಳು ತಮಗೆ ತಿಳಿಸಬೇಕೆಂದು ನಿಯಮ ಇದೆಯೋ ಇಲ್ಲವೋ?

ಶ್ರೀ ಅಜೀಜ್‌ಸೇಟ್: ತಾವು ಕೊಟ್ಟ ದೂರುಗಳು ಜನರಲ್ ಮ್ಯಾನೇಜರ್‌ರವರಿಗೆ ಹೋಗುತ್ತವೆ ಮತ್ತು ಜನರಲ್ ಮ್ಯಾನೇಜರ್ ಲೆವೆಲ್‌ನಲ್ಲೇ ಇತ್ಯರ್ಥವಾಗುತ್ತದೆ. ಅದು ನಮಗೆ ಬರುವುದಿಲ್ಲ.

ಶ್ರೀ ಟಿ.ಎನ್. ನರಸಿಂಹಮೂರ್ತಿ: ತಾವು ಈ ಖಾತೆಯನ್ನು ವಹಿಸಿಕೊಂಡ ಮೇಲೆ ಎಷ್ಟು ದೂರು ಪುಸ್ತಕಗಳನ್ನು ಪರಿಶೀಲನೆ ಮಾಡಿದ್ದೀರಿ?

ಶ್ರೀ ಅಜೀಜ್‌ಸೇಟ್: ದೂರುಗಳು ನಮಗೆ ಬರುವುದಿಲ್ಲ, ಅದು ಜನರಲ್ ಮ್ಯಾನೇಜರ್‌ಗೆ ಹೋಗುತ್ತದೆಯೆಂದು ಮೊದಲೇ ತಿಳಿಸಿದ್ದೇನೆ.

ಶ್ರೀ ಬಿ.ಎಸ್. ಗಂಗಾಚಾರಿ: ಬಸ್‌ಗಳಲ್ಲಿ ಪ್ರಥಮ ಚಿಕಿತ್ಸೆಯ ಡಬ್ಬಿಯಿದ್ದು ಅದರಲ್ಲಿ ಪ್ರಥಮ ಚಿಕಿತ್ಸೆಯ ವಸ್ತುಗಳೇ ಇರುವುದಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೆ?

ಶ್ರೀ ಅಜೀಜ್‌ಸೇಟ್: ಇದು ನನ್ನ ಗಮನಕ್ಕೆ ಬಂದಿದೆ ಮತ್ತು ಇದನ್ನು ತೀವ್ರವಾಗಿ ಪರಿಶೀಲಿಸುತ್ತೇನೆ.

ಶ್ರೀ ಟಿ.ಎನ್. ನರಸಿಂಹಮೂರ್ತಿ: ಸಾಮಾನ್ಯವಾಗಿ ಇಂಥ ದೂರುಗಳು ಬೆಂಗಳೂರು ಬಸ್ ನಿಲ್ದಾಣದಲ್ಲೂ ಜಾಸ್ತಿ ಬರುತ್ತಿದೆ. ಇದರ ಬಗ್ಗೆ ಸರಿಯಾದ ಕ್ರಮ ತೆಗೆದುಕೊಂಡು ಬೆಂಗಳೂರು ನಗರ ಬಸ್ ನಿಲ್ದಾಣದಲ್ಲಿ ಬರುವ ದೂರುಗಳನ್ನು ಪರಿಶೀಲನೆ ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಮಾನ್ಯ ವಿರೋಧಪಕ್ಷದ ನಾಯಕರು ಇಂಥಾ ಪ್ರಶ್ನೆ ಕೇಳಿರುವುದು ನನಗೆ ಆಶ್ಚರ್ಯವನ್ನುಂಟು ಮಾಡಿದೆ. ಡ್ರೈವರ್, ಕಂಡಕ್ಟರ್ ಮುಂತಾದ ನೌಕರರ ಬಗ್ಗೆ ದೂರುಗಳು ಬರುತ್ತವೆ. ಅವು ಜನರಲ್ ಮ್ಯಾನೇಜರ್‌ಗೆ ಹೋಗುತ್ತವೆ. ಮೇಲಾಧಿಕಾರಿಗಳ ಬಗ್ಗೆ ದೂರುಗಳು ಬಂದರೆ ಅವು ನನಗೆ ನೇರವಾಗಿ ಬರುತ್ತವೆ. ನಾವು ಅವುಗಳ ಮೇಲೆ ಕ್ರಮ ತೆಗೆದು ಕೊಳ್ಳುತ್ತೇವೆ.

ಶ್ರೀ ಮಳ್ಳೂರು ಆನಂದರಾವ್: ಪ್ರತಿಯೊಂದು ಬಸ್ ನಿಲ್ದಾಣದಲ್ಲೂ ರೈಲ್ವೆ ನಿಲ್ದಾಣದಂತೆ ದೂರು ಪುಸ್ತಕಗಳನ್ನು ಇರಿಸಿ ಪ್ರಯಾಣಿಕರು ತಮ್ಮ ದೂರುಗಳನ್ನು ದಾಖಲಿಸಲು ಅನುಕೂಲವಾಗುವಂತೆ ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಈ ಸಲಹೆ ತಕ್ಷಣ ಕ್ರಮ ತೆಗೆದುಕೊಳ್ಳಲು ಉತ್ತಮವಾಗಿದೆ.

ಶ್ರೀ ಜಿ.ಎಸ್. ಉಲ್ಲಾಳ್: ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಿಂದ ನಿಯಮಿತವಾಗಿ ದೂರುಗಳ ಮತ್ತು ಸಲಹೆಗಳ ವರದಿ ತರಿಸಿಕೊಂಡು ಮಂತ್ರಿಗಳು ಪರಿಶೀಲನೆ ಮಾಡಲು ಸಾಧ್ಯವಾಗುವುದಿಲ್ಲವೇ?

ಶ್ರೀ ಅಜೀಜ್ ಸೇಟ್: ಈ ಸಲಹೆ ಪರಿಗಣಿಸಲು ಅತ್ಯುತ್ತಮವಾಗಿದೆ.

ಶ್ರೀ ಬಿ.ಜಿ. ಲಿಂಗೇಗೌಡ: ದೂರುಗಳ ಪುಸ್ತಕದಲ್ಲಿ ವಿಧಾನ ಮಂಡಲದ ಸದಸ್ಯರು ದೂರುಗಳನ್ನು ಬರೆದರೂ ಅದು ನಮ್ಮ ಗಮನಕ್ಕೆ ಬಂದಿಲ್ಲವೆಂದು ಮಾನ್ಯ ಮಂತ್ರಿಗಳು ಹೇಳಿದರು. ಇನ್ನು ಮೇಲಾದರೂ ಮಾನ್ಯ ಮಂತ್ರಿಗಳು ಈ ಬಗ್ಗೆ ಜನರಲ್ ಮ್ಯಾನೇಜರ್‌ರನ್ನು ಕೇಳುತ್ತಾರೆಯೇ?

ಶ್ರೀ ಅಜೀಜ್‌ಸೇಟ್: ನಾನು ಈಗ ತಾನೇ ಹೇಳಿದೆ ಅಂತಹ ದೂರುಗಳನ್ನು ಪರಿಶೀಲನೆ ಮಾಡುತ್ತಿದ್ದೇವೆ. ಅವುಗಳ ಬಗ್ಗೆ ಕ್ರಮ ತೆಗೆದುಕೊಳ್ಳುತ್ತಿದ್ದೇವೆ ಎಂದು. ಸರ್ಕಾರ ಎಂದರೆ ಕೇವಲ ಮಂತ್ರಿಗಳಲ್ಲ, ಬದಲು ಸರ್ಕಾರದ ಕಾರ್ಯದರ್ಶಿ, ಉಪಕಾರ್ಯದರ್ಶಿ, ಮತ್ತು ಇತರೇ ಅಧಿಕಾರಿಗಳು ಇದ್ದಾರೆ. ಸದಸ್ಯರು ನನಗೆ ಬರೆದು ತಿಳಿಸಿದರೆ ಆ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದು.

ಶ್ರೀ ಜಿ.ಎಸ್. ಉಲ್ಲಾಳ್: ಮಾನ್ಯ ಸಚಿವರು ಎಂ.ಎಸ್. ಆರ್.ಟಿ.ಸಿ. ಉತ್ತಮವಾಗಿದೆ ಸರ್ಕಾರದ ಗ್ರಿಪ್‌ನಲ್ಲಿದೆ ಎಂದು ಹೇಳಿದರು. ಅದನ್ನು ಕೇಳಿ ನನಗೆ ಸಂತೋಷವಾಯಿತು. ನಾನು ಸಲಹೆ ಮಾಡುವುದೇನೆಂದರೆ, ನಮ್ಮ ಪಬ್ಲಿಕ್ ಅಂಡರ್ ಟೇಕಿಂಗ್ ಕಮಿಟಿಯವರನ್ನು ಅದರಲ್ಲಿ ಹಾಕಿ ಅದು ಹೇಗೆ ಇಂಪ್ರೂವ್ ಆಗುತ್ತದೆ ಎಂದು ನೋಡಿ.

ಶ್ರೀ ಅಜೀಜ್ ಸೇಟ್: ಈಗಾಗಲೇ ಸಂಸ್ಥೆಯಲ್ಲಿ ಸರ್ಕಾರದ ಪ್ರಾತಿನಿಧ್ಯ ಜಾಸ್ತಿ ಇದೆ. ಗೃಹ ಕಾರ್ಯದರ್ಶಿ, ಹಣಕಾಸು ಕಾರ್ಯದರ್ಶಿ, ಕಾನೂನು ಕಾರ್ಯದರ್ಶಿಯವರಿದ್ದಾರೆ. ಉಪಾಧ್ಯಕ್ಷರು ಹಿರಿಯ ಐ.ಎ.ಎಸ್. ಅಧಿಕಾರಿಯಾಗಿದ್ದಾರೆ. ಆದ್ದರಿಂದ ಸರ್ಕಾರ ಸಂಸ್ಥೆಯ ಕಾರ್ಯನಿರ್ವಹಣೆಯ ಬಗ್ಗೆ ತೀವ್ರವಾದ ನಿಗಾ ವಹಿಸಿದೆ.

ಶ್ರೀ ಎಸ್.ಆರ್. ಬೊಮ್ಮಾಯಿ: ಈಗ ಟಿಕೇಟ್ ರಹಿತ ಪ್ರಯಾಣದಿಂದ ಹೆಚ್ಚಿನ ನಷ್ಟವಾಗುತ್ತದೆ. ಇದರೊಂದಿಗೆ ಡಿಸ್‌ಮಿಸ್ ಆದ ಕಂಡಕ್ಟರ್‌ರನ್ನುಪುನಃ ನೇಮಿಸುವುದರಿಂದ ಹೆಚ್ಚಿನ ನಷ್ಟ ಕಂಪನಿಗೆ ಆಗುತ್ತಿದೆ. ಆದ್ದರಿಂದ ಇಂಥ ನೇಮಕಗಳನ್ನು ಈಗಲಾದರೂ ಬಂದ್ ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಅದು ಹಿಂದಿನ ಸರ್ಕಾರದ ನೀತಿ. ನಾನು ಯಾವ ತಪ್ಪಿತಸ್ಥರನ್ನೂ ಹತ್ತಿರ ಸೇರಿಸದಂತೆ ತಿಳಿಸಿದ್ದೇನೆ. ಮೊದಲನೇ ತಪ್ಪಿಗೆ ಎಚ್ಚರಿಕೆ ಹೇಳಲಾಗುವುದು, ಎರಡನೆಯ ತಪ್ಪಿಗೆ ತೀವ್ರವಾಗಿ ಎಚ್ಚರಿಸಲಾಗುವುದು, ಮೂರನೇ ತಪ್ಪಿಗೆ ವಜಾ ಮಾಡಲಾಗುವುದು.

ಶ್ರೀ ಟಿ.ಎನ್. ನರಸಿಂಹಮೂರ್ತಿ: ಹಾಗಾದರೆ ನೀರು ಯಾರನ್ನೂ ಪುನಃ ನೇಮಕ ಮಾಡಿಲ್ಲವೆ?

ಶ್ರೀ ಅಜೀಜ್ ಸೇಟ್: ನಾನು ಯಾರನ್ನೂ ಸೇರಿಸಿಲ್ಲ. ಒಂದು ಕೊಲೆ ಕೇಸಿನಲ್ಲಿ ಆರೋಪಿಯಾಗಿದ್ದ ಕಂಡಕ್ಟರನೊಬ್ಬ ಕೋರ್ಟಿನಿಂದ ಬಿಡುಗಡೆ ಹೊಂದಿ ಬಂದ ನಂತರ ಅವರ ಪುನರ್ನೇಮಕಕ್ಕೆ ನಾನು ಆದೇಶ ನೀಡಿದ್ದೇನೆ. ಬಿಟ್ಟರೆ ಬೇರೆ ಯಾರನ್ನೂ ಈ ವಿಚಾರದಲ್ಲಿ ಹತ್ತಿರ ಸೇರಿಸಿಲ್ಲ.

## ದೂರ ಪ್ರಯಾಣದ ಪ್ರಯಾಣಿಕರಿಗೆ ರಾಜ್ಯ ಸಾರಿಗೆ ಬಸ್‌ಗಳಲ್ಲಿ ಉಂಟಾಗುತ್ತಿರುವ ತೊಂದರೆ ಕುರಿತು ಚರ್ಚೆ (ದಿನಾಂಕ: 22.05.1973)

ಶ್ರೀ ವೈ. ರಾಮಚಂದ್ರ: ಮಾನ್ಯ ಮಂತ್ರಿಗಳು ಹೆಚ್ಚು ದೂರದ ಪ್ರಯಾಣಿಕರಿಗೆ ಉತ್ತಮ ಸೌಲಭ್ಯಗಳನ್ನು ಒದಗಿಸುತ್ತಿದ್ದೇವೆ ಎಂದು ಹೇಳಿದರು. ಆದರೆ ನಾನು ಸ್ವಂತ ಅನುಭವದಂತೆ ಬೆಂಗಳೂರಿನಿಂದ ಬೊಂಬಾಯಿಗೆ ಪ್ರಯಾಣ ಹೋಗಿದ್ದೆ. ಈ ಬಸ್‌ನಲ್ಲಿ ಪ್ರಯಾಣಿಸುವುದು ನನಗೆ ಬಹಳ ಕಷ್ಟವಾಯಿತು. ಇದೇ ಪರಿಸ್ಥಿತಿ ಇತರೇ ಸಾರ್ವಜನಿಕರಿಗೆ ಇರುತ್ತದೆ. ಈ ಬಸ್ಸು ದಾರಿಯಲ್ಲಿ ಹೋಗುವಾಗ ಬಸ್‌ಸ್ಟ್ಯಾಂಡ್‌ಗಳಲ್ಲಿ ಇರತಕ್ಕ ಹೋಟೆಲ್‌ಗಳಲ್ಲಿ ಊಟ ತಿಂಡಿಯ ವ್ಯವಸ್ಥೆ ಸರಿಯಾಗಿರುವುದಿಲ್ಲ. ಬಾತ್‌ರೂಮ್ ಮತ್ತು ಲಾವೇಟರಿಗಳ ಸ್ಥಿತಿ ಸರಿಯಿರುವುದಿಲ್ಲ. ಈ ಬಗ್ಗೆ ಮಾನ್ಯ ಮಂತ್ರಿಗಳು ಗಮನ ಹರಿಸಬೇಕು.

ಶ್ರೀ ಗೋವಿಂದ ಪಿ. ಒಡೆಯರಾಜ್: ಇದು ಕೇವಲ ಬೆಂಗಳೂರು ಬೊಂಬಾಯಿಯ ನಡುವಿನ ಸಮಸ್ಯೆ ಮಾತ್ರವಲ್ಲ. ಎಲ್ಲಾ ದೂರ ಪ್ರಯಾಣದ ಮಾರ್ಗಗಳಲ್ಲೂ ಈ ತೊಂದರೆ ಇದೆ.

ಶ್ರೀ ಅಜೀಜ್‌ಸೇಟ್: ನಾನು ಸದಸ್ಯರ ಭಾವನೆಗಳನ್ನು ಸಮ್ಮತಿಸುತ್ತೇನೆ. ಚಿತ್ರದುರ್ಗದಲ್ಲಿ ಉತ್ತಮ ಬಸ್ ನಿಲ್ದಾಣವಿಲ್ಲವೆಂಬುದನ್ನು ಒಪ್ಪುತ್ತೇನೆ. ಇಲ್ಲಿ ಒಂದು ಸುಂದರ ಬಸ್‌ನಿಲ್ದಾಣವನ್ನು ನಿರ್ಮಿಸುವ ಆಲೋಚನೆಯಿದೆ. ಬೊಂಬಾಯಿಯ ಜನ ನಮ್ಮ ಬಸ್ಸು, ಚಾಲಕ ಮತ್ತು ಸಿಬ್ಬಂದಿಯ ಕಾರ್ಯನಿರ್ವಹಣೆ ಮೆಚ್ಚುತ್ತಾರೆ. ಆದರೆ ನಮ್ಮ ಸದಸ್ಯರೇ ಅದನ್ನು ಒಪ್ಪುತ್ತಿಲ್ಲ.

ಶ್ರೀ ಬಸವರಾಜ ಕಟ್ಟೀಮನಿ: ಶ್ರೀಮಾನ್ ಅಜೀಜ್ ಸೇಟರು ಸಾರಿಗೆ ಮಂತ್ರಿಯಾದ ಮೇಲೆ ಬಸ್ಸುಗಳ ಮಟ್ಟಿಗೆ ಅನೇಕ ಸುಧಾರಣೆಗಳನ್ನು ಮಾಡಿದ್ದಾರೆ. ಅದಕ್ಕೆ ಅಭಿನಂದನೆಗಳನ್ನು ಅರ್ಪಿಸುತ್ತೇನೆ. ಧಾರವಾಡದಿಂದ ಹೊರಡುವ ಬಸ್ಸುಗಳಲ್ಲಿ ಸ್ಥಳಾವಕಾಶವೇ ಸಿಗುವುದಿಲ್ಲ. ಆದ್ದರಿಂದ ಮಾನ್ಯ ಮಂತ್ರಿಗಳು ಬೆಳಿಗ್ಗೆ 6.00 ಘಂಟೆಗೆ ಧಾರವಾಡದಿಂದ ಬೆಂಗಳೂರಿಗೆ ಬಸ್ ಸೌಲಭ್ಯ ನೀಡಬೇಕು.

ಶ್ರೀ ಅಜೀಜ್‌ಸೇಟ್: ಅದರ ಬಗ್ಗೆ ಪ್ರಯತ್ನ ಮಾಡುತ್ತೇನೆ.

ಶ್ರೀ ಜತ್ತಪ್ಪ ರೈ: ಬಸ್ಸುಗಳು ನಿಗದಿತ ಸಮಯಕ್ಕೆ ಸರಿಯಾಗಿ ಹೊರಡುವಂತೆ ವ್ಯವಸ್ಥೆ ಮಾಡಬಹುದೇ?

ಶ್ರೀ ಎಂ.ವಿ. ವೆಂಕಟಪ್ಪ: ರಾಜ್ಯ ಸಾರಿಗೆ ಬಸ್ಸುಗಳನ್ನು ಖಾಸಗಿ ಬಸ್ಸುಗಳ ರೀತಿ ರೇಡಿಯೋ ಫ್ಯಾನು, ಹಾರ್ನ್ ಮುಂತಾದವುಗಳನ್ನು ಅಳವಡಿಸಿ ಆಕರ್ಷಣೀಯ ಮಾಡಬಾರದೇಕೆ?

ಶ್ರೀ ಅಜೀಜ್‌ಸೇಟ್: ವೆಂಕಟಪ್ಪ ಅವರ ಸ್ವಂತ ಬಸ್ಸನ್ನು ಅವರ ಇಚ್ಛೆಯಂತೆ ಸಿಂಗರಿಸಬಹುದು. ಆದರೆ ರಾಜ್ಯ ಸಾರಿಗೆ ಸಂಸ್ಥೆಗೆ ತನ್ನದೇ ನಿಯಮವಿದೆ. ಯಾವುದೇ ಬದಲಾವಣೆ ತಕ್ಷಣಕ್ಕೆ ಆಗುವುದಿಲ್ಲ ಹಾರ್ನ್ ಬದಲಾವಣೆಗೆ ಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ ವೈ. ರಾಮಚಂದ್ರ: ದೂರ ಪ್ರಯಾಣದ ಬಸ್‌ನಲ್ಲಿ ಪ್ರಯಾಣಿಸುವವರಿಗೆ ಮಾರ್ಗ ಮಧ್ಯ ನಿಲ್ದಾಣಗಳಲ್ಲಿ ಶೌಚಾಲಯ, ನೀರಿನ ವ್ಯವಸ್ಥೆ ಮಾಡುತ್ತೀರಾ?

ಶ್ರೀ ಅಜೀಜ್‌ಸೇಟ್: ಅದು ಒಳ್ಳೆಯ ಸಲಹೆ ಯೋಚನೆ ಮಾಡೋಣ.

ಶ್ರೀ ವಿ.ಎಸ್. ಕೃಷ್ಣಯ್ಯರ್: ವೇಳೆಗೆ ಸರಿಯಾಗಿ ಬಸ್ಸು ಓಡಿಸುವ ಚಾಲಕ ನಿರ್ವಾಹಕರಿಗೆ ಇನ್ಸೆಂಟಿವ್ ನೀಡುವ ಯೋಜನೆ ಇದೆಯೆ?

ಶ್ರೀ ಅಜೀಜ್‌ಸೇಟ್: ಈ ಬಗ್ಗೆ ತೀವ್ರವಾಗಿ ಯೋಜನೆಯನ್ನು ತಯಾರಿಸುತ್ತಿದ್ದೇವೆ.

ಶ್ರೀ ಎಂ.ವಿ. ವೆಂಕಟಪ್ಪ: ಪ್ರಯಾಣಿಕರ ಕಷ್ಟವನ್ನು ಅರಿತುಕೊಳ್ಳಲು ಮಾನ್ಯ ಸಚಿವರು ತಿಂಗಳಿಗೆ ಒಂದು ಸಲ ಮಫ್ತಿಯಲ್ಲಿ ಬಸ್‌ನಲ್ಲಿ ಪ್ರಯಾಣ ಏಕೆ ಮಾಡಬಾರದು

ಶ್ರೀ ಅಜೀಜ್‌ಸೇಟ್: ಅದನ್ನೂ ಮಾಡಿದ್ದೇನೆ. ಎಷ್ಟೋಸರ್ತಿ ಹೋಗಿದ್ದೇನೆ.

## ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸುಗಳ ಪ್ರಯಾಣ ದರ ಏರಿಕೆ

(ದಿನಾಂಕ: 15.10.1973)

ರಸ್ತೆ ಸಾರಿಗೆ ಕಾನೂನಿನ್ವಯ ಮೈಸೂರು ರಸ್ತೆ ಸಾರಿಗೆಸಂಸ್ಥೆಯು ಉತ್ತಮ, ಮಿತವ್ಯಯ ಮತ್ತು ಸರಿಯಾದ ಹೊಂದಾಣಿಕೆಯಿಂದ ಕೂಡಿದ ಪ್ರಯಾಣ ಸೇವೆಯನ್ನು ನೀಡಲು ಬದ್ಧವಾಗಿದೆ. ಇದೊಂದು ಸಾರ್ವಜನಿಕ ಸಾರಿಗೆ ವ್ಯವಸ್ಥೆಯಾಗಿದ್ದು ಪ್ರಯಾಣಿಕರಿಗೆ ಉತ್ತಮ ಸೇವೆಯನ್ನು ನೀಡಲು ವಾಣಿಜ್ಯ ರೀತಿಯಿಂದ ಕಾರ್ಯನಿರ್ವಹಿಸಬೇಕಾಗಿದೆ.

1 ಆಗಸ್ಟ್ 1961 ರಲ್ಲಿ ಸಾರಿಗೆ ಸಂಸ್ಥೆಯ ಆರಂಭದಿಂದಲೂ ಸಾರಿಗೆ ಸಂಸ್ಥೆಯು ನಾಲ್ಕು ಬಾರಿ ಅಂದರೆ 15.11.1961, 1.9.1966, 1.1.1972 ಮತ್ತು 14.10.1973 ರಲ್ಲಿ ಪರಿಷ್ಕರಿಸಿದೆ. 14.10.1973 ರಿಂದ ಜಾರಿಯಾಗುವಂತೆ ಗ್ರಾಮಾಂತರ ಸಾರಿಗೆ ದರವನ್ನು ಶೇಕಡ 10 ಹೆಚ್ಚಿಸಲಾಗಿದೆ. ನಗರ ಸಾರಿಗೆಯು ನಿಗಮ ನಿರ್ವಹಣೆಯಲ್ಲಿರುವುದರಿಂದ ಸಧ್ಯದಲ್ಲೇ ಅದರ ದರವನ್ನು ಹೆಚ್ಚಿಸಲಾಗುವುದು.

ರೈಲ್ವೆ, ವಿಮಾನ ಮತ್ತು ಜಲ ಪ್ರಯಾಣದ ದರಗಳು ಪ್ರತಿವರ್ಷವೂ ಏರಿಕೆಯಾಗುತ್ತವೆ ಆದರೆ ನಾರಿಗೆ ಸಂಸ್ಥೆಯು ಕೇವಲ ಅಗತ್ಯದಿಂದ ಮತ್ತು ತೀರಾ ನಗಣ್ಯವಾಗುವಂತೆ ಮಾತ್ರ ಏರಿಸಿದೆ.

ಕಳೆದ ಬಾರಿ ದರ ಹೆಚ್ಚಳ 1.1.1972 ಆಗಿನಿಂದ ಕೆಳಕಂಡಂತೆ ವಸ್ತುಗಳ ಬೆಲೆ ಏರಿಕೆಯಾಗಿದೆ ಉದಾಹರಣೆಗೆ

1. ಚಾಸೀಸ್, ಇಂಜಿನ್, ಆಕ್ಸೆಲ್‌ಗಳ ಖರೀದಿಯ ಸೇಲ್ಸ್ ಟ್ಯಾಕ್ಸ್ ಶೇಕಡ 12 ರಿಂದ 14 ಹೆಚ್ಚಳವಾಗಿದೆ. ಅಲ್ಯೂಮಿನಿಯಂ ಶೀಟ್, ಯಂತ್ರ, ಬಿಡಿಭಾಗಗಳಿಗೆ 0.50 ಶೇಕಡ ಹೆಚ್ಚಳವಾಗಿದೆ. ಈಗ ಏರಿಕೆ 23 ಲಕ್ಷಗಳು.
2. ಹೆಚ್.ಎಸ್.ಡಿ.ಯ ಬೆಲೆ ರೂ. 770.00 ರಿಂದ 799.00 ಪ್ರತಿ ಕಿಲೋ ಲೀಟರ್‌ಗೆ ಏರಿಕೆಯಾಗಿದೆ. ಹೆಚ್ಚುವರಿ ವೆಚ್ಚ ರೂ. 16 ಲಕ್ಷ.
3. ಪ್ರಯಾಣಿಕ ತೆರಿಗೆ ಪ್ರತಿ ಆಸನಕ್ಕೆ ರೂ. 8.50 ಯಿಂದ 10.65ಕ್ಕೆ ಏರಿಕೆಯಾಗಿದೆ. ಇದು, 1.1.72 ರಿಂದ ಶೇಕಡ 25.3 ಹೆಚ್ಚಳವಾಗಿದೆ. ಇದರಿಂದ ಉಂಟಾಗುವ ಹೆಚ್ಚು ವೆಚ್ಚ ರೂ. 35 ಲಕ್ಷ.
4. ಮೂಲ ಧನದ ಮೇಲೆ ಬಡ್ಡಿ ಮತ್ತು ಸವಕಳಿಯಿಂದಾಗಿ ಚಾಸೀಸ್, ಬಾಡಿ - ಬಿಲ್ಡಿಂಗ್‌ಗಳ ಬೆಲೆ ಹೆಚ್ಚಿದ್ದು ಅದರ ಹೆಚ್ಚುವರಿ ಖರ್ಚು 16 ಲಕ್ಷ.
5. 4000 ದಿಂದ 5000 ವಸ್ತುಗಳ ಮೇಲೆ ಸಾಮಾನ್ಯ ಏರಿಕೆ 3 ರಿಂದ ಶೇಕಡ 5 ಹೆಚ್ಚಿದೆ. ಇದರ ಹೆಚ್ಚುವರಿ ಖರ್ಚು ರೂ. 10 ಲಕ್ಷ.
6. ನಿರ್ವಾಹಕ ಮತ್ತು ಚಾಲಕರ ದಿನಭತ್ಯೆ ಹೆಚ್ಚಳದ ವೆಚ್ಚ ರೂ. 23 ಲಕ್ಷ.
7. ವರ್ಕ್‌ಷಾಪ್ ಸ್ಟಾಫ್‌ಗಳ ರಿವಾಸ್ಟ್ ವೆಚ್ಚ ರೂ. 7 ಲಕ್ಷ.
8. ತುಟ್ಟಿಭತ್ಯೆ ನೀಡಿಕೆ ಯಿಂದಾಗಿರುವ ವೆಚ್ಚ 57 ಲಕ್ಷ.
9. ಎಲ್ಲಾ ನೌಕರರಿಗೂ ನೀಡಲಾದ ಬೋನಸ್ ವೆಚ್ಚ ರೂ. 52 ಲಕ್ಷ.
10. ಮೋಟಾರ್ ಟ್ರಾನ್ಸ್ ಪೋರ್ಟ್ ವರ್ಕರ್ಸ್ ಆ್ಯಕ್ಟ್‌ನನ್ವಯ ಮತ್ತು ಸ್ಟಾಫಿಂಗ್ ಪ್ಯಾಟರ್ನ್ ಸ್ಟಾಂಡರ್ಡೈಸೇಷನ್‌ನಿಂದ ಪ್ರತಿ ವರ್ಷ 24 ಲಕ್ಷ.
11. ಇಂಟರಿಮ್ ರಿಲೀಫ್‌ನ ಮೊತ್ತ 60 ಲಕ್ಷ ಪ್ರತಿ ವರ್ಷಕ್ಕೆ.

ಈ ದರ ಏರಿಕೆಯಿಂದ ಲಭ್ಯವಾಗುವ ಹೆಚ್ಚುವರಿ ಆದಾಯ 3 ಕೋಟಿ, ಆದರೆ ವೆಚ್ಚ 4.75 ಕೋಟಿ. ಉಳಿದ ವ್ಯತ್ಯಾಸವನ್ನು ನಿರ್ವಹಣೆಯನ್ನು ಉತ್ತಮಪಡಿಸುವುದರಿಂದ

ಸಿಬ್ಬಂದಿಯ ಮತ್ತು ವಸ್ತುಗಳ ಉತ್ತಮ ಬಳಕೆಯಿಂದ, ಸಿಬ್ಬಂದಿಗಳ ಉತ್ತಮ ಬಳಕೆಯಿಂದ ಮತ್ತು ಪ್ರಾದೇಶಿಕ ಕಾರ್ಯಗಾರಗಳ ನಿರ್ವಹಣೆಯಿಂದ ಸರಿದೂಗಿಸಲಾಗುವುದು.

ವೆಚ್ಚ ಹೆಚ್ಚಳ ಶೇಕಡ 20 ಆಗಿದ್ದು ದರ ಪರಿಷ್ಕರಣೆಗೆ ಶೇಕಡ 10 ಆಗಿದ್ದು ಇದು ನ್ಯಾಯಯುತ ಮಾತ್ರವಲ್ಲ ಅಗತ್ಯ ಕೂಡ. ತನ್ನ ದರ ಹೆಚ್ಚಳದಿಂದ ಪ್ರಯಾಣಿಕರಿಗೆ ಭಾರವಾಗದಂತೆ ಗಮನದಲ್ಲಿರಿಸಿಕೊಂಡಿದೆ. ಈ ಹೆಚ್ಚಳ ಸಂಸ್ಥೆಯ ನಿರ್ವಹಣೆಯ ದೃಷ್ಟಿಯಿಂದ ದರ ಹೆಚ್ಚಳ ಮಾಡಿದ್ದು ಇದು ವಾಣಿಜ್ಯ ಸಂಸ್ಥೆಯಲ್ಲದ್ದರಿಂದ ಈ ನಿರ್ವಹಣೆಗೆ ಅಗತ್ಯವಾಗಿತ್ತು.

ಮಾನ್ಯ ಸದಸ್ಯರು ಬೆಂಗಳೂರು ನಗರ ಸಾರಿಗೆಯ ಬೆಲೆ ಹೆಚ್ಚಳ ಮಾಡಿಲ್ಲದ ಬಗ್ಗೆ ಕೇಳಿದ್ದಾರೆ. ಬೆಂಗಳೂರು ನಗರ ಸಾರಿಗೆ ನಷ್ಟದಲ್ಲೇ ಮುಂದುವರಿದಿದ್ದು ಅದರ ಸುಧಾರಣೆಗಾಗಿ ಬೆಲೆ ಏರಿಕೆ ಅನಿವಾರ್ಯವಾಗಿದೆ. ಸಧ್ಯದಲ್ಲೆ ಈ ಬೆಂಗಳೂರು ನಗರ ಸಾರಿಗೆಯ ಬೆಲೆ ಏರಿಸಲಾಗುವುದು. ಇತ್ತೀಚಿಗೆ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುವ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರು ಬೆಲೆಯೇರಿಸಲು ತಿಳಿಸಿದ್ದಾರೆ. ಅವರ ಮನವಿಯು ಕೂಡಾ ಸರ್ಕಾರದ ಪರಿಶೀಲನೆಯಲ್ಲಿದೆ. ಇತ್ತೀಚಿಗೆ ಖಾಸಗಿ ಬಸ್ ಮಾಲೀಕರೂ ಕೂಡ ಬೆಲೆಯೇರಿಸಿದ್ದಾರೆ. ಆದರೆ ಖಾಸಗಿ ಬಸ್‌ಗಳನ್ನು ಸರ್ಕಾರಿ ಬಸ್‌ಗಳೊಂದಿಗೆ ಸಮೀಕರಿಸುವಂತಿಲ್ಲ. ಸಾರಿಗೆ ಸಂಸ್ಥೆಯು ಪ್ರಯಾಣಿಕರಿಗ ಉತ್ತಮ ಪ್ರಯಾಣದೊಂದಿಗ ಇತರೇ ಸೌಲಭ್ಯಗಳನ್ನೂ ಒದಗಿಸಬೇಕಾಗಿದೆ. ಉದಾಹರಣೆಗೆ ಬಸ್ ಪ್ರಯಾಣದೊಂದಿಗೆ ಬಸ್ ನಿಲ್ದಾಣ, ಊಟದ ವ್ಯವಸ್ಥೆ, ವಿಶ್ರಾಂತಿ ಗೃಹ ಶೌಚಾಲಯ ಇತ್ಯಾದಿ ಸೌಕರ್ಯಗಳನ್ನು ನೀಡಬೇಕು.

ಮೋಟಾರ್ ವೆಹಿಕಲ್ ಟ್ರಾನ್ಸ್‌ಪೋರ್ಟ್ ವರ್ಕರ್ಸ್ ಆ್ಯಕ್ಟ್‌ನ ಪ್ರಯಾಣ ಸಿಬ್ಬಂದಿಗಳಿಗೆ ಕನಿಷ್ಠ ವೇತನ ಮತ್ತು ಇತರೇ ಭತ್ಯೆಗಳನ್ನು ನೀಡಬೇಕು. ಬಸ್‌ಗಳ ನಿರ್ವಹಣೆಗಾಗಿ ಡಿಪೋಗಳು ಮತ್ತು ಪ್ರಾದೇಶಿಕ ಕಾರ್ಯಗಾರವನ್ನು ನಿರ್ವಹಿಸಬೇಕಾಗಿದೆ. ಅದರೊಂದಿಗ ಕಾನೂನಿನನ್ವಯ ಸಿಬ್ಬಂದಿವರ್ಗದವರಿಗೆ ಕಾರ್ಯನಿರ್ವಹಣೆ ಸಮಯ ನಿಗದಿಪಡಿಸಿರುವುದರಿಂದ ಖಾಸಗಿಯವರಿಗಿಂತ ಹೆಚ್ಚು ಸಿಬ್ಬಂದಿ ನೇಮಕಮಾಡಬೇಕಾಗಿದೆ. ಇಷ್ಟೆಲ್ಲಾ ಇದ್ದು ಸಹ ನೆರೆಯ ರಾಜ್ಯಗಳಿಗೆ ಹೋಲಿಸಿದರೆ ರಾಜ್ಯ ಸಾರಿಗೆ ಸಂಸ್ಥೆಯ ಬೆಲೆ ಹೆಚ್ಚಳ ಅಂತಹ ತೀವ್ರವಾದುದೇನೂ ಅಲ್ಲ.

ಶ್ರೀ ರಾಮಕೃಷ್ಣ ಹೆಗಡೆ: ಮಾನ್ಯ ಸಾರಿಗೆ ಸಚಿವರು ತಮ್ಮ ಎದೆ ಮೇಲೆ ಕೈಯಿಟ್ಟು ಹೇಳಿಬಿಡಲಿ ಇದರಲ್ಲಿ ಹೇಳಿರತಕ್ಕ ವಿಚಾರ ಸ್ವತಃ ಅವರಿಗೆ ಸಮ್ಮತಿಯಾಗಿದೆಯೆ ಹೇಗೆ?

ಶ್ರೀ ಎಂ.ವಿ. ವೆಂಕಟಪ್ಪ: ನಿಯಮ 278 ರನ್ವಯ ಪಾಯಿಂಟ್ ಆಫ್ ಆರ್ಡರನ್ನು ಹೇಳುತ್ತಿದ್ದೇನೆ. ಸಭಾಪತಿಯವರ ಆದೇಶದನ್ವಯ ಸಚಿವರು ಸಾರ್ವಜನಿಕ ಹಿತಾಸಕ್ತಿಗೆ ಸಂಬಂಧಿಸಿದ ಹೇಳಿಕೆ ನೀಡುತ್ತಿದ್ದಾಗ ಮಧ್ಯೆ ಪ್ರಶ್ನೆಗಳನ್ನು ಕೇಳಬಾರದು.

**ಉಪ ಸಭಾಪತಿಗಳು** : ನಿಯಮ 278 ರನ್ವಯ ಸಚಿವರು ಹೇಳಿಕೆ ನೀಡುತ್ತಿದ್ದಾಗ ಸದಸ್ಯರು ಪ್ರಶ್ನೆ ಕೇಳಬಾರದು. ನಾವು ನಿಯಮಕ್ಕೆ ಬದ್ಧರಾಗಿರೋಣ.

ಶ್ರೀ **ರಾಮಕೃಷ್ಣ ಹೆಗಡೆ**: ನಿಯಮ ಸ್ಪಷ್ಟವಾಗಿದೆ. ಹಾಗೆ ನಾವು ನಿಯಮವನ್ನು ಉಲ್ಲಂಘಿಸಿಲ್ಲ ಸಚಿವರು ಹೇಳಿಕೆ ನೀಡುವಾಗ ನಾವು ಮಧ್ಯದಲ್ಲಿ ಪ್ರಶ್ನೆಯನ್ನು ಕೇಳಿಲ್ಲ.

**ಉಪ ಸಭಾಪತಿಗಳು** : ನಾನು ವಿರೋಧ ಪಕ್ಷದ ನಾಯಕರಿಗೆ ಈ ವಿಷಯದ ಚರ್ಚೆಯನ್ನು ಮುಂದುವರಿಸದಂತೆ ಮನವಿ ಮಾಡುತ್ತಿದ್ದೇನೆ.

ಶ್ರೀ ಎಸ್.ಆರ್. **ಬೊಮ್ಮಾಯಿ** : ನಾವು ಪೀಠದ ಆದೇಶವನ್ನು ಉಲ್ಲಂಘಿಸುತ್ತಿಲ್ಲ. ಆದರೆ ಸಚಿವರು ಹೇಳಿಕೆ ನೀಡುವಾಗ ವಿಚಾರಗಳ ಬಗ್ಗೆ ಸ್ಪಷ್ಟೀಕರಣ ಕೇಳುವುದು ತಪ್ಪಲ್ಲ.

ಶ್ರೀ **ರಾಮಕೃಷ್ಣ ಹೆಗಡೆ** : ನಿಯಮ 278 ಸ್ಪಷ್ಟವಾಗಿದೆ. ಪೀಠದ ಅಪ್ಪಣೆಯನ್ನು ಪಡೆದು ಸಚಿವರು ಹೇಳಿಕೆ ನೀಡಲು ಆರಂಭಿಸಿದಾಗ ಸದಸ್ಯರು ಆ ಬಗ್ಗೆ ಪ್ರಶ್ನೆ ಎತ್ತಬಾರದು. ಯಾವ ಸದಸ್ಯರು ಸಚಿವರ ಹೇಳಿಕೆಗೆ ಪ್ರಶ್ನೆ ಎತ್ತಿಲ್ಲ.

**ಉಪ ಸಭಾಪತಿಗಳು** : ವಿಶೇಷ ಸಂದರ್ಭದಂತೆ ವಿರೋಧಪಕ್ಷದ ನಾಯಕರಿಗೆ ಒಂದೆರಡು ಅಂಶಗಳ ಮೇಲೆ ಸ್ಪಷ್ಟೀಕರಣ ಕೇಳಲು ಅನುಮತಿ ನೀಡುತ್ತೇನೆ.

ಶ್ರೀ ಎಂ.ವಿ. **ವೆಂಕಟಪ್ಪ** : ಸಭಾಧ್ಯಕ್ಷರು ನಿಯಮವನ್ನು ಮಾರ್ಪಾಡು ಮಾಡುತ್ತಿದ್ದಾರೊ ಏನು ?

**ಉಪ ಸಭಾಪತಿಗಳು** : ನಾನು ನಿಯಮಕ್ಕೆ ಬದ್ಧನಾಗಿರುತ್ತೇನೆ. ಹಾಗಿದ್ದರೂ ವಿರೋಧಪಕ್ಷದ ನಾಯಕರು ಒಂದರೆರಡು ಸ್ಪಷ್ಟೀಕರಣ ಬಯಸಿರುವುದರಿಂದ ಅನುಮತಿ ನೀಡಿದ್ದೇನೆ.

ಶ್ರೀ **ರಾಮಕೃಷ್ಣ ಹೆಗಡೆ** : ಸಚಿವರ ಹೇಳಿಕೆಯನ್ನು ತಡೆಗಟ್ಟುವ ಪ್ರಯತ್ನ ಇದಲ್ಲ. ಹೇಳಿಕೆಯ ಬಗ್ಗೆ ನಂತರ ನಿಧಾನವಾಗಿ ಚರ್ಚೆ ನಡೆಸಬಹುದಾಗಿದೆ. ಆದರೆ ಒಂದೆರಡು ಅಂಶಗಳ ಬಗ್ಗೆ ಸ್ಪಷ್ಟೀಕರಣ ಕೋರುತ್ತೇನೆ. ನಾನು ಮೊದಲೇ ಹೇಳಿದೆ ಸಾರಿಗೆ ಸಚಿವರು ತಮ್ಮ ಎದೆಯ ಮೇಲೆ ಕೈಯಿಟ್ಟು ಹೇಳಲಿ ಎಂದು ಅದು ಸಾಧ್ಯವಿಲ್ಲವೆಂದು ಅವರಿಗೂ ಗೊತ್ತು. ನಿರ್ವಹಣಾ ವೆಚ್ಚ ಹೆಚ್ಚಾಗಿರುವುದಕ್ಕೆ ಸರ್ಕಾರವೇ ಕಾರಣ. ಮಾರಾಟ ತೆರಿಗೆಯನ್ನು ಶೇಕಡ 10 ರಿಂದ 14ಕ್ಕೆ ಏರಿಸಿದಾಗ ನಾವು ವಿರೋಧಿಸಿದೆವು. ಇದರ ನೇರ ಪರಿಣಾಮ ಸಾರಿಗೆ ಸಂಸ್ಥೆಯ ಮೇಲೆ ಆಗುತ್ತದೆಯೆಂದು ಹೇಳಿದರೂ ಕೇಳಲಿಲ್ಲ, ಪರಿಣಾಮ 23 ಲಕ್ಷ ಹೆಚ್ಚು ವೆಚ್ಚ. ಇನ್ನು ಡೀಸೆಲ್ ಇತರೆ ಆಯಿಲ್‌ಗಳ ಮೇಲೆ ಕೇಂದ್ರ ಸರ್ಕಾರ ಬೆಲೆ ಹೆಚ್ಚಿಸಿದಾಗ ನಾವು ವಿರೋಧಿಸಿದೆವು. ಪ್ರಯಾಣಿಕರ ಮೇಲೆ ತೆರಿಗೆ. ಇದನ್ನು ಸರ್ಕಾರ ಹಾಕಿದಾಗ ನಾವು ಪ್ರತಿಭಟಿಸಿದೆವು. ಆದರೆ ಪ್ರಯೋಜನವಾಗಲಿಲ್ಲ. ಇದೆಲ್ಲದರ ಫಲಿತಾಂಶ ಈಗ ಬೆಲೆ ಹೆಚ್ಚಿಸಬೇಕಾದ ಅನಿವಾರ್ಯತೆ.

ಇನ್ನು ವಿಮಾನ ಮತ್ತು ರೈಲು ಪ್ರಯಾಣ ದರದ ಏರಿಕೆ ಬಗ್ಗೆ, ಅದರಲ್ಲಿ ಹೆಚ್ಚು ಬಳಸುವವರು ಮೇಲ್ವರ್ಗದವರು ಆದರೆ ಬಸ್ಸುಗಳ ಸಾಮಾನ್ಯರ ಅವಶ್ಯಕತೆಯಾದ್ದರಿಂದ ಅದರ ಹೋಲಿಕೆ ಅರ್ಥಹೀನ.

ಶ್ರೀ ಅಜೀಜ್‌ಸೇಟ್ : ಪಾರ್ಲಿಮೆಂಟ್ ಸದಸ್ಯರಿಂದ ನಾಲ್ಕನೇ ದರ್ಜೆಯವರೆಗೆ ಎಲ್ಲಾ ಬಸ್ಸನ್ನು ಬಳಸುತ್ತಾರೆ.

ಶ್ರೀ ರಾಮಕೃಷ್ಣ ಹೆಗಡೆ : ಎಂ.ಪಿ. ಮತ್ತು ಎಂ.ಎಲ್.ಎ.ಗಳಿಗೆ ಫ್ರಿಪಾಸು ಇರುವುದರಿಂದ ಅವರು ಉಪಯೋಗಿಸುತ್ತಾರೆ. ಲಕ್ಸುರಿ ಬಸ್ಸುಗಳನ್ನು ರಾತ್ರಿ ವೇಳೆ ಪರೀಕ್ಷಿಸಿದರೆ ಬರೀ ಎಂ.ಪಿ., ಎಂ.ಎಲ್.ಎ.ಗಳೇ ತುಂಬಿರುತ್ತಾರೆ.

ಶ್ರೀ ಅಜೀಜ್‌ಸೇಟ್: ಮಾನ್ಯರೇ ಚರ್ಚೆಗೆ ನೋಟೀಸ್ ನೀಡುವುದಾಗಿ ಹೇಳಿ ಈಗ ವಿಚಾರಗಳನ್ನು ಎತ್ತುತ್ತಿದ್ದಾರೆ. ಇದೇನು ಸ್ಪಷ್ಟೀಕರಣವೋ ಅಥವಾ ಚರ್ಚೆಯೋ ತಿಳಿಯಲಿಲ್ಲ.

ಶ್ರೀ ಎಂ.ಪಿ. ಪೆರುಮಾಳ್ : ಖಾಸಗಿ ಬಸ್ ಮಾಲೀಕರು ಬೆಲೆ ಏರಿಸಿಲ್ಲವೊ?

ಶ್ರೀ ರಾಮಕೃಷ್ಣ ಹೆಗಡೆ : ಇಲ್ಲ. ಅವರ ಪರವಾಗಿ ಏಕೆ ಇವರು ಹೇಳಿಕೆ ನೀಡಿದರೊ ಗೊತ್ತಿಲ್ಲ. ಸಿಟಿ ಸರ್ವಿಸುಗಳಲ್ಲೂ ಬೆಲೆ ಏರಿಸುತ್ತೇವೆ ಎಂದರು. ವಿರೋಧಪಕ್ಷದ ಸದಸ್ಯರ ಹೆಸರು ಹೇಳಿ ಅವರ ಬೆಲೆ ಏರಿಕೆಗೆ ಶಿಫಾರಸ್ಸು ಮಾಡಿದ್ದಾರೆ ಎಂದರು. ನಾನು ಸಾರ್ವಜನಿಕರ ಅವಗಾಹನೆಗಾಗಿ ಒಂದು ವಿಷಯ ಸ್ಪಷ್ಟಪಡಿಸುತ್ತಿದ್ದೇನೆ. ಈ ಕಡೆ ಕುಳಿತಿರುವ ಯಾವ ಸದಸ್ಯರು ಸಿಟಿ ಸರ್ವೀಸ್ ಬೆಲೆ ಹೆಚ್ಚಿಸಲು ಕೇಳಿಲ್ಲ. ಹಾಗೆ ಹೆಚ್ಚಿಸಿದರೆ ವಿರೋಧಿಸುತ್ತೇವೆ. ಮಂತ್ರಿಗಳು ಬಸ್ ಆಪರೇಷನ್‌ನಿಂದ ನಷ್ಟವಾಗುತ್ತಿದೆ, ಖರ್ಚು ಹೆಚ್ಚುತ್ತಿದೆ, ಆದುದರಿಂದ ದರ ಹೆಚ್ಚಿಸುತ್ತೇನೆ; ಎಂದು ಹೇಳಿದರು. ಹಳ್ಳಿಗಾಡಿನವರಿಂದ ಲಾಭವಾಗಿದೆ. ಸಿಟಿಯಲ್ಲಿ ನಷ್ಟವಾಗಿದೆ. ಆದ್ದರಿಂದ ಏಕೆ ಸಿಟಿ ಬಸ್‌ದರ ಹೆಚ್ಚಿಸಲು ಧೈರ್ಯ ಮಾಡಲಿಲ್ಲ ಎಂದು ಹೇಳಿದೆ. ಇದರ ಅರ್ಥ ಹೆಚ್ಚಿಸ ಬೇಕೆಂದಲ್ಲ, ಹೆಚ್ಚಿಸಿದರೆ ಅದರ ಪರಿಣಾಮ ಎದುರಿಸಬೇಕಾಗುತ್ತದೆ.

ಉಪ ಸಭಾಪತಿಗಳು : ನಾನು ವಿಶೇಷವಾಗಿ ಒಂದೆರಡು ಸ್ಪಷ್ಟೀಕರಣ ಕೇಳಲು ವಿರೋಧಪಕ್ಷದ ನಾಯಕರಿಗೆ ಹೇಳಿದ್ದೆ, ಅವರು ಕೇಳಿದ್ದಾರೆ. ಇತರೇ ಸದಸ್ಯರು ಚರ್ಚೆ ಮುಂದುವರಿಸಬಾರದು. ಇದನ್ನು ಸಾರಿಗೆ ಸಚಿವರು ಉತ್ತರಿಸಬೇಕು.

ಶ್ರೀ ಎಸ್.ಆರ್. ಬೊಮ್ಮಾಯಿ : ಸಚಿವರು ಹೇಳಿಕೆ ನೀಡುವಾಗ ಒಂದೆರಡು ಪ್ರಶ್ನೆಗಳ ಕುರಿತು ಸ್ಪಷ್ಟೀಕರಣ ನೀಡಲು ಸದಸ್ಯರಿಗೆ ಅವಕಾಶ ನೀಡಬೇಕು.

ಶ್ರೀ ಎಂ. ಸತ್ಯನಾರಾಯಣರಾವ್ : ನಿಗದಿತ ಸ್ಪಷ್ಟೀಕರಣಕ್ಕೆ ಅವಕಾಶ ನೀಡಬೇಕು.

ಉಪಸಭಾಪತಿಗಳು : ನಾನು ಎಸ್.ಆರ್. ಬೊಮ್ಮಾಯಿ ಮತ್ತು ಸತ್ಯನಾರಾಯಣ ರಾವ್‌ಗೆ ಅವಕಾಶ ನೀಡಿದರೆ ಎಲ್ಲಾ ಸದಸ್ಯರು ಕೇಳುತ್ತಾರೆ. ಆದ್ದರಿಂದ ಸಾರಿಗೆ ಸಚಿವರು ಅವರನ್ನು ತಮ್ಮ ಕೊಠಡಿಗೆ ಕರೆಸಿಕೊಂಡು ಸ್ಪಷ್ಟೀಕರಣ ನೀಡಬೇಕು.

ಶ್ರೀ ಅಜೀಜ್‌ಸೇಟ್: ಅವರು ನನ್ನ ಕೊಠಡಿಗೆ ಬರಲು ನನ್ನ ಸ್ವಾಗತವಿದೆ.

ಶ್ರೀ ಎಸ್.ಆರ್. ಬೊಮ್ಮಾಯಿ: ಮಾನ್ಯರೇ ಸಾರಿಗೆ ಸಂಸ್ಥೆಯ ಆರ್ಥಿಕ ಸ್ಥಿತಿಯ ಬಗ್ಗೆ ಸ್ಪಷ್ಟೀಕರಣ ಕೇಳಲು ತಮ್ಮ ಅನುಮತಿ ಕೋರುತ್ತಿದ್ದೇನೆ. ಈ ವಿಚಾರದಲ್ಲಿ ನಾನು ಸ್ಪಷ್ಟೀಕರಣ ಕೇಳದಿದ್ದರೆ ನನ್ನ ಕರ್ತವ್ಯಕ್ಕೆ ಲೋಪವೆಸಗಿದಂತಾಗುತ್ತದೆ.

ಶ್ರೀ ಅಜೀಜ್‌ಸೇಟ್: ನೀವು ನನಗೆ ಹೇಳಿಕೆ ನೀಡಲು ತಿಳಿಸಿದ್ದೀರಿ. ಅದಕ್ಕೆ ನಿಂತಿದ್ದೇನೆ. ಆದ್ದರಿಂದ ಮಾನ್ಯ ಸದಸ್ಯರ ಬೇಡಿಕೆಗೆ ನಾನು ಒಪ್ಪುವುದಿಲ್ಲ.

ಉಪಸಬಾಪತಿಗಳು: ಸಚಿವರು ಒಪ್ಪಿದರೆ ಸದಸ್ಯರು ಸ್ಪಷ್ಟೀಕರಣ ಕೇಳಬಹುದು.

ಶ್ರೀ ಅಜೀಜ್‌ಸೇಟ್: ನಾನು ಒಪ್ಪುವುದಿಲ್ಲ.

ಶ್ರೀ ಎಸ್.ಆರ್. ಬೊಮ್ಮಾಯಿ: ಹಾಗಾದರೆ ನಾನು ಸದನದ ಕಾರ್ಯಕಲಾಪದಲ್ಲಿ ಭಾಗವಹಿಸುವುದಿಲ್ಲ. ನನಗೆ ಒಂದು ನಿಮಿಷದ ಕಾಲಾವಕಾಶ ಕೇಳುತ್ತಿದ್ದೇನೆ. ಪೀಠಾಧ್ಯಕ್ಷರು ಅನುಮತಿ ನೀಡದಿದ್ದರೆ ಕಲಾಪ ಬಹಿಷ್ಕರಿಸುತ್ತೇನೆ.

ಉಪ ಸಭಾಪತಿಗಳು : ನಾವು ಇನ್ನೂ 5 ಬಿಲ್‌ಗಳನ್ನು ಪರಿಶೀಲಿಸಬೇಕಾಗಿದೆ. ಸಮಯಾಭಾವವಿದೆ. ಆದರೂ ಮಾನ್ಯ ಸದಸ್ಯರು ಒಂದು ನಿಮಿಷ ತೆಗೆದುಕೊಳ್ಳಲಿ

ಶ್ರೀ ಎಸ್.ಆರ್. ಬೊಮ್ಮಾಯಿ : ಮಾನ್ಯ ಸಾರಿಗೆ ಸಚಿವರು ತಮ್ಮ ಹೇಳಿಕೆಯಲ್ಲಿ ರಾಜ್ಯ ಸಾರಿಗೆ ಸಂಸ್ಥೆ ದರಗಳನ್ನು ಏರಿಸುವುದಕ್ಕೆ ಕಾರಣಗಳನ್ನು ಹೇಳುತ್ತಾ, ಈ ಒಂದು ಅವಧಿಯಲ್ಲಿ ಖರ್ಚು ಜಾಸ್ತಿಯಾಗಿದೆ ಎಂದು ಹೇಳಿದ್ದಾರೆಯೆ ಹೊರತು ಬಂದ ಉತ್ಪತ್ತಿ ಎಷ್ಟು ಎಂಬುದನ್ನು ತಿಳಿಸಿಲ್ಲ. ದರವನ್ನು ಏರಿಸುವುದಕ್ಕೆ ಬಂದ ಉತ್ಪತ್ತಿ ಮತ್ತು ಖರ್ಚುಗಳನ್ನು ಹೋಲಿಸಿ ನೋಡುವುದು ಸೂಕ್ತ. ಆದ್ದರಿಂದ ಅವರು ಬರೀ ಖರ್ಚಿನ ವಿಚಾರ ತಿಳಿಸಿದರೆ ಸಾಲದು ಆದಾಯದ ಬಗ್ಗೆಯೂ ತಿಳಿಸಬೇಕೆಂದು ಕೋರುತ್ತೇನೆ.

ಶ್ರೀ ಅಜೀಜ್‌ಸೇಟ್ : ಮಾನ್ಯ ವಿರೋಧಿ ನಾಯಕರಿಗೂ ಹಾಗೂ ಎಸ್.ಆರ್. ಬೊಮ್ಮಾಯಿಯವರಿಗೂ ನಾನು ಕೃತಜ್ಞನಾಗಿದ್ದೇನೆ. ನಾನು ಎಂ.ಎಸ್.ಆರ್.ಟಿ.ಸಿ.ಯ ದರ ಹೆಚ್ಚಳಕ್ಕೆ ಕಾರಣವನ್ನು ಹೋಲಿಕೆಯನ್ನು ನೀಡಿದ್ದೇನೆ. ಖಾಸಗಿ ಬಸ್ ಮಾಲೀಕರು ಬಸ್ ಪ್ರಯಾಣ ದರವನ್ನು ಶೇಕಡ 10 ಹೆಚ್ಚಿಸಿದ್ದಾರೆ. ನಾವು ಅನಗತ್ಯವಾಗಿ ದರ ಏರಿಸಿಲ್ಲ. ನೆನ್ನೆಯ ದಿನ ಸದಸ್ಯರು ಮಾತನಾಡುತ್ತಾ ನಗರ ಸಾರಿಗೆ ನಷ್ಟದಲ್ಲಿದ್ದರೆ ಗ್ರಾಮಾಂತರ ಸಾರಿಗೆಯ

ಬೆಲೆ ಏರಿಕೆ ಏಕೆ ಎಂದರು. ಅದನ್ನು ನಾನು ರಾಜಕೀಯವಾಗಿ ತೆಗೆದುಕೊಂಡಿಲ್ಲ ಎಲ್ಲಾ ಅಗತ್ಯ ವಸ್ತುಗಳ ಬೆಲೆಯಲ್ಲಿ ಏರಿಕೆಯಾಗಿದೆ. ನನಗೆ ಬೆಲೆ ಏರಿಸದೇ ಬೇರೆ ದಾರಿ ಇರಲಿಲ್ಲ. ಎಲ್ಲಾ ಸದಸ್ಯರೂ ಸೂಚಿಸಿದಂತೆ ಬೆಲೆ ಏರಿಸಲು ನಿರ್ಧರಿಸಲಾಯಿತು.

ಶ್ರೀ ಎಂ. ಸತ್ಯನಾರಾಯಣರಾವ್: ಸಚಿವರು ಸದನವನ್ನು ತಪ್ಪು ಮಾಹಿತಿಯ ಮೂಲಕ ದಾರಿ ತಪ್ಪಿಸುತ್ತಿದ್ದಾರೆ. ಯಾವ ಸದಸ್ಯರೂ ಬೆಲೆ ಏರಿಕೆಯನ್ನು ಸೂಚಿಸಿಲ್ಲ. ಸದನವನ್ನು ತಪ್ಪುದಾರಿಗೆ ಎಳೆಯಲು ಸಚಿವರು ಯತ್ನಿಸುತ್ತಿದ್ದಾರೆ.

ಶ್ರೀ ಅಜೀಜ್‌ಸೇಟ್: ಸದಸ್ಯರ ಹೇಳಿಕೆಯನ್ನು ನಾನು ಒಪ್ಪುವುದಿಲ್ಲ. ಕೆಲವು ಸದಸ್ಯರು ಬೆಲೆ ಏರಿಕೆಯನ್ನು ಸೂಚಿಸಿದರು. ಸರ್ಕಾರ ಎಂ.ಎಸ್.ಆರ್.ಟಿ.ಸಿ.ಯ ಬೆಲೆಯೇರಿಸುತ್ತಾ ನಗರ ಸಾರಿಗೆಯನ್ನು ಬಿಟ್ಟಿದ್ದೇಕೆ? ಎಂದರು. ಅವರು ಅದನ್ನು ನೇರವಾಗಿ ಸೂಚಿಸದಿದ್ದರೂ ಪರೋಕ್ಷವಾಗಿ ಬೆಲೆಯೇರಿಕೆಯ ಇಂಗಿತ ಸೂಚಿಸಿದರು. ಆದಕಾರಣ ಅದನ್ನು ಹೆಚ್ಚಿಸಲಾಗಿದೆ.

ಶ್ರೀ ಎಂ. ಸತ್ಯನಾರಾಯಣರಾವ್ : ನಾವು ಬಲವಾಗಿ ಪ್ರತಿಭಟಿಸುತ್ತೇವೆ.

ಶ್ರೀ ಅಜೀಜ್‌ಸೇಟ್: ಈಗಲೂ ಸದಸ್ಯರು ಮಾತನಾಡುತ್ತಾ ಗ್ರಾಮಾಂತರ ಪ್ರದೇಶದ ಬೆಲೆ ಏರಿಸಿದ್ದು ನಗರ ಸಾರಿಗೆ ನಷ್ಟದಲ್ಲಿದ್ದರೂ ಅದನ್ನೇಕೆ ಏರಿಸಿಲ್ಲವೆಂಬಂತೆ ಮಾತಾಡಿದ್ದಾರೆ. ಇದರರ್ಥ ಏನು?

ಉಪಸಭಾಪತಿ: ಸದನ ಸರಿಯಾಗಿಲ್ಲ. ಇದನ್ನು ದಾಖಲಿಸಬಾರದು.

ಶ್ರೀ ಎಸ್.ಆರ್. ಬೊಮ್ಮಾಯಿ : I raise a point of order ಪದೇ ಪದೇ ನಾವು ಹೇಳುತ್ತಲೇ ಇದ್ದೇವೆ, ಶ್ರೀ ರಾಮಕೃಷ್ಣ ಹೆಗಡೆಯವರು ಸ್ಪಷ್ಟೀಕರಣ ಕೇಳುವಾಗ ಸ್ಪಷ್ಟವಾಗಿ ಹೇಳಿದ್ದಾರೆ. ಈ ಸಭೆಯಲ್ಲಿ ಅವರಾಗಲಿ ನಾವಾಗಲಿ ಸಿಟಿ ಬಸ್ ದರ ಹೆಚ್ಚಿಸಲು ಹೇಳಿಲ್ಲ. ಒಂದು ವೇಳೆ ಸಿಟಿ ಬಸ್ ಪ್ರಯಾಣ ದರ ಏರಿಕೆ ಮಾಡುವುದಕ್ಕೆ ನಿಮಗೆ ಧೈರ್ಯವಿದೆಯೇ? ಈ ಧೈರ್ಯ ನಿಮಗಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಈ ರೀತಿ ಹೇಳಿರುವುದನ್ನು ಮಂತ್ರಿಗಳು ಹೇಳದೆ ಪದೇ ಪದೇ ವಿರೋಧಿ ಸದಸ್ಯರು ಸಿಟಿ ಬಸ್ ಪ್ರಯಾಣ ದರ ಹೆಚ್ಚಿಗೆಗೆ ಸೂಚಿಸಿದ್ದಾರೆಂದು ಹೇಳಿದ್ದಾರೆ. ಅದಕ್ಕೋಸ್ಕರ ನಾವು ಹೆಚ್ಚು ಮಾಡಬೇಕಾಗುತ್ತದೆಂಬುದಾಗಿ ಮಂತ್ರಿಗಳು ಹೇಳುತ್ತಿರುವುದು ಇನ್‌ಸಿನ್ಯೂಯೇಷನ್ ಆಗುತ್ತದೆ. ನಾವು ಮಾತನಾಡದೇ ಇರುವುದನ್ನು ಮಾತನಾಡಿದ್ದೇವೆಂದು ಹೇಳುವುದು ಅನಾವಶ್ಯಕವಾಗಿ ಚಾರ್ಜು ಮಾಡುವುದು ನಿಜವಾಗಿಯೂ ಇನ್‌ಸಿನ್ಯುಯೇಷನ್ ಆಗುತ್ತದೆ ಈ ರೀತಿಯಾಗಿ ಹೇಳುವುದು ತಪ್ಪು ಎಂದು ನಾವು ಹೇಳಿದರೂ ಅವರು ಅದೇ ರೀತಿ ಹೇಳುತ್ತಿದ್ದಾರೆ.

ಉಪ ಸಭಾಪತಿಗಳು: ವಿರೋಧಿ ನಾಯಕರು ಎತ್ತಿದ ಪಾಯಿಂಟ್ ಆಫ್ ಆರ್ಡರ್‌ನಂತೆ ಮಾನ್ಯ ಸಚಿವರು ಈ ರೀತಿಯಾಗಿ ಮಾತುಗಳನ್ನು ಬಳಸಬಾರದು.

ಶ್ರೀ ಅಜೀಜ್‌ಸೇಟ್ : ನಾನು ಸರಳ ಇಂಗ್ಲೀಷ್‌ನಲ್ಲಿ ಹೇಳಿದ್ದೇನೆ. ಯಾವ ಕಟು ಪದವನ್ನೂ ಬಳಸಿಲ್ಲ. ವಿರೋಧಪಕ್ಷದವರು ನೇರವಾಗಿ ಬೆಲೆಯೇರಿಕೆಗೆ ಹೇಳಿಲ್ಲ, ಆದರೆ ಪರೋಕ್ಷವಾಗಿ ಸಮ್ಮತಿಸಿದ್ದಾರೆ ಎಂದು ಹೇಳಿದ್ದೇನೆ.

ಶ್ರೀ ಮಳ್ಳೂರು ಆನಂದರಾವ್: ಸಾರಿಗೆ ಮಂತ್ರಿಗಳು ಸ್ವಲ್ಪ ಜವಾಬ್ದಾರಿಯಿಂದ ಮಾತನಾಡಬೇಕು. ಇಲ್ಲದಿದ್ದರೆ ಹೊರಗಡೆ ಇರತಕ್ಕ ಜನರು ಇಂತಹ ವಿಷಯಗಳನ್ನು ಪತ್ರಿಕೆಗಳಲ್ಲಿ ನೋಡಿದರೆ ಏನು ಹೇಳುತ್ತಾರೆಂಬುದನ್ನು ಗಮನಿಸಬೇಕು. ತಾವು ರೂಲಿಂಗ್ ಕೊಟ್ಟರೂ ಕೂಡ ಅವರು ಅದನ್ನೇ ರಿಪೀಟ್ ಮಾಡಿದರೆ ಅದಷ್ಟು ಚೆನ್ನಾಗಿರುವುದಿಲ್ಲ. ಅವರಿಗೆ ಕೂಡ ಇನ್ನೊಂದು ಸಾರಿ ಆದೇಶ ಕೊಡಿ.

ಉಪಸಭಾಪತಿಗಳು : ಯಾವ ಸಂದರ್ಭದಲ್ಲಿ ಅವರಿಗೆ ಆದೇಶ ಕೊಡಬೇಕು, ಯಾವ ಸಂದರ್ಭದಲ್ಲಿ ರಿಕಾರ್ಡ್ಸ್ ಮತ್ತು ಪ್ರೊಸೀಡಿಂಗ್ಸ್ ತರಿಸಿ ನೋಡಬೇಕೆಂಬ ಬಗ್ಗೆ ನಾನು ಬಹಳ ಎಚ್ಚರಿಕೆಯನ್ನು ವಹಿಸುತ್ತಿದ್ದೇನೆ. ವಿರೋಧಪಕ್ಷದ ನಾಯಕರು ಏನು ಹೇಳಿದ್ದಾರೆಂದು ಈಗಾಗಲೇ ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಈ ವಿಚಾರವನ್ನು ಬಿಟ್ಟು ಬೇರೆ ಹೇಳಬೇಕು.

ಶ್ರೀ ಎಂ. ಆನಂದರಾವ್: ಮಾನ್ಯ ಮಂತ್ರಿಗಳು ಮತ್ತೆ ಅದನ್ನೇ ಹೇಳಿದರೆ ಅವರು ಇಲ್ಲಿ ಮುಂದೆ ಮಾತನಾಡುವುದಕ್ಕೆ ಬಿಡುವುದಿಲ್ಲ.

ಶ್ರೀ ಅಜೀಜ್‌ಸೇಟ್: ಮಾನ್ಯ ಸದಸ್ಯರು ಆ ರೀತಿ ಹೇಳಿದರೆ ಅದರ ಅರ್ಥವೇನು?

ಉಪಸಭಾಪತಿಗಳು: ಮಳ್ಳೂರು ಆನಂದರಾಯರು ಬೆದರಿಕೆಯ ಭಾಷೆಯನ್ನು ಬಳಸಬಾರದು. ಸಚಿವರನ್ನು ರೇಗಿಸಬಾರದು. ಸಚಿವರು ಉದ್ವೇಗಗೊಳ್ಳಬಾರದು.

ಶ್ರೀ ಅಜೀಜ್‌ಸೇಟ್: ಬಸ್ ಪ್ರಯಾಣದರ ಏರಿಕೆ ವಿಚಾರದಲ್ಲಿ ರಾಜಕೀಯ ನಾಟಕಗಳನ್ನು ಮಾಡಬಾರದೆಂದು ರಾಜಕೀಯ ನಾಯಕರಲ್ಲಿ ಮತ್ತು ಸದಸ್ಯರಲ್ಲಿ ಕೇಳುತ್ತೇನೆ. ಬೆಲೆ ಏರಿಕೆ ನ್ಯಾಯಯುತವಾದದ್ದು ಮತ್ತು ಅಗತ್ಯವಾದುದು. ವಿರೋಧಪಕ್ಷದ ನಾಯಕರಿಂದ ಬೆಲೆ ಏರಿಕೆ ಕುರಿತಂತೆ ನೇರ ಬೇಡಿಕೆ ಬರದಿದ್ದರೂ ಪರೋಕ್ಷವಾಗಿ ಸೂಚಿಸಿದ್ದಾರೆಂದು ನಾನು ಮನವರಿಕೆ ಮಾಡುತ್ತಿದ್ದೇನೆ.

ಶ್ರೀ ಎಸ್.ಆರ್. ಬೊಮ್ಮಾಯಿ : ಇದು ಸರಿಯಲ್ಲ.

ಉಪಸಭಾಪತಿಗಳು : ಈ ಸಂಬಂಧ ಚರ್ಚೆ ಇಲ್ಲಿಗೆ ಮುಕ್ತಾಯವಾಗಿದೆಯೆಂದು ತಿಳಿಸುತ್ತಿದ್ದೇನೆ.

## ವಿಶೇಷ ಘಟಕ ಯೋಜನೆಯ ಫಲಾನುಭವಿಗಳ ಬಗ್ಗೆ ಚರ್ಚೆ.

(ದಿನಾಂಕ: 28.6.1990)

**ಡಾ|| ಸಿದ್ಧಲಿಂಗಯ್ಯ** : ಮಾನ್ಯ ಆಹಾರ ಹಾಗೂ ನಾಗರೀಕ ಸರಬರಾಜು ಸಚಿವರು ಉತ್ತರಿಸುವರೆ?

ಕಳೆದ ಮೂರು ವರ್ಷಗಳಲ್ಲಿ ಪರಿಶಿಷ್ಟ ಜಾತಿಯವರಿಗೆ 2 ರೂ. ಗೆ ಒಂದು ಕೆ.ಜಿ. ಅಕ್ಕಿ ಸರಬರಾಜು ಮಾಡಲು ವಿಶೇಷ ಘಟಕ ಯೋಜನೆಯಡಿಯಲ್ಲಿ ಎಷ್ಟು ಹಣ ನಿಗದಿಪಡಿಸಲಾಗಿತ್ತು? ಸದರಿ ಹಣದಲ್ಲಿ ವೆಚ್ಚವಾಗಿರುವ ಹಣದ ಮೊತ್ತವೆಷ್ಟು ಹಾಗೂ ಫಲಾನುಭವಿಗಳ ಸಂಖ್ಯೆ ಎಷ್ಟು?

**ಶ್ರೀ ಅಜೀಜ್‌ಸೇಟ್** : (ಆಹಾರ ಹಾಗೂ ನಾಗರೀಕ ಸರಬರಾಜು ಸಚಿವರು) ಸಹಾಯಧನಯುಕ್ತ ಆಹಾರ ಪದಾರ್ಥಗಳ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಪಡಿತರ ಕಾರ್ಡುದಾರರಿಗೆ ಪ್ರತ್ಯೇಕ ಪಡಿತರ ವಿತರಣೆ ಮಾಡುವ ವ್ಯವಸ್ಥೆ ಇರುವುದಿಲ್ಲ. ಆದ್ದರಿಂದ ವಿಶೇಷ ಘಟಕ ಯೋಜನೆಯಡಿ ಖರ್ಚು ಮಾಡುವ ಸಂಭವ ಉದ್ಭವಿಸುವುದಿಲ್ಲ. ಈಗ ಗ್ರಾಮಾಂತರ ಪ್ರದೇಶಗಳಲ್ಲಿ 30.74 ಲಕ್ಷ ಹಸಿರು ಕಾರ್ಡು ಹೊಂದಿದವರು ಇವರ ಪೈಕಿ 7.06 ಲಕ್ಷ ಕಾರ್ಡುಗಳು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದವರಾಗಿದ್ದಾರೆ.

**ಡಾ|| ಸಿದ್ಧಲಿಂಗಯ್ಯ** : ವಿಶೇಷ ಯೋಜನೆಯಡಿಯಲ್ಲಿ ಖರ್ಚು ಮಾಡುವ ಸಂಭವ ಉದ್ಭವಿಸುವುದಿಲ್ಲ ಎಂದು ಮಂತ್ರಿಗಳು ಹೇಳಿದ್ದಾರೆ. ಇದು ಬಹಳ ತಪ್ಪು ಎಂದು ಹೇಳುತ್ತೇನೆ. 90-91 ರಲ್ಲಿ 15 ಲಕ್ಷ ನಿಗದಿ ಮಾಡಿದ್ದಾರೆ. ಈ ಹಣ ಖರ್ಚು ಮಾಡಿಲ್ಲವೇ? ದುರುಪಯೋಗವಾಗಿದೆಯೇ? ಸಚಿವರು ಹೇಳಬೇಕು.

**ಶ್ರೀ ಅಜೀಜ್‌ಸೇಟ್**: ಇಲ್ಲಿ ಯಾವುದು ಕೂಡ ದುರುಪಯೋಗವಾಗಿಲ್ಲ. ಆ ರೀತಿ ಆಗಿರುವುದು ನನ್ನ ಗಮನಕ್ಕೆ ಬಂದಿಲ್ಲ. ಸದಸ್ಯರ ಪ್ರಶ್ನೆ ಏನೆಂದರೆ (a) What is the allotment made to the Scheduled Caste Card holders Rs. 2per Kg. Rice Scheme for the last 3 years under special component plan? Reply is there is no specific allotment for Scheduled Caste card holders under this scheme. Hence the question of expenditure under special component plan does not arise.

**ಡಾ|| ಎಸ್. ಸಿದ್ಧಲಿಂಗಯ್ಯ** : ಮಾನ್ಯ ಸಚಿವರು ಸಮಾಜವಾದಿಗಳು, ಅವರ ಬಗ್ಗೆ ನನಗೆ ತುಂಬಾ ಗೌರವವಿದೆ. ದಯವಿಟ್ಟು ಕನ್ನಡದಲ್ಲಿ ಅವರು ಉತ್ತರ ಹೇಳಬೇಕು.

**ಸಭಾಪತಿಯವರು** : ಅದರ ಬಗ್ಗೆ ಚರ್ಚೆ ಆಗಿದೆ. ಅವರಿಗೆ ಕನ್ನಡ ಓದಲಿಕ್ಕೆ ಬರುವುದಿಲ್ಲ.

ಶ್ರೀ ಅಜೀಜ್‌ಸೇಟ್ : ನಾನು ಈ ಮೊದಲೇ ಹೇಳಿದ್ದೇನೆ. ನನಗೆ ಕನ್ನಡ ಓದುವುದಕ್ಕೆ ಬರೆಯುವುದಕ್ಕೆ ಬರುವುದಿಲ್ಲವೆಂದು. ಈ 70ನೇ ವಯಸ್ಸಿನಲ್ಲಿ ಕನ್ನಡ ಕಲಿಯಲು ಹೋಗಬೇಕೆ?

**ಡಾ|| ಸಿದ್ದಲಿಂಗಯ್ಯ** : ಮಾನ್ಯಸಚಿವರು ಕನ್ನಡದಲ್ಲಿ ತುಂಬಾ ಚೆನ್ನಾಗಿ ಮಾತನಾಡುತ್ತಾರೆ. ಅವರು ಅದನ್ನು ಬರವಣಿಗೆಯಲ್ಲಿ ಅಬ್ಯಾಸ ಮಾಡಿಕೊಳ್ಳಬೇಕು.

ಶ್ರೀ ಅಜೀಜ್‌ಸೇಟ್ : ಮಾತನಾಡುವುದಕ್ಕು, ಸರಿಯಾಗಿ ಉತ್ತರ ಕೊಡುವುದಕ್ಕು ಬಹಳ ವ್ಯತ್ಯಾಸವಿದೆ.

**ಡಾ|| ಸಿದ್ಧಲಿಂಗಯ್ಯ** : ಇದು ನಮ್ಮ ಕನ್ನಡ ನಾಡಿನ ದುರಂತ.

**ಸಭಾಪತಿಯವರು** : ದುರಂತ ಎಂದು ಏತಕ್ಕೆ ಹೇಳುತ್ತೀರಿ.

ಶ್ರೀ ಅಜೀಜ್‌ಸೇಟ್ : ನಿಮಗೆ ಉತ್ತರ ಬೇಕಾದರೆ ಹೇಳುತ್ತೇನೆ. ಬೇಡ ಎಂದರೆ ಸುಮ್ಮನೆ ಕೂರುತ್ತೇನೆ.

**ಡಾ|| ಸಿದ್ದಲಿಂಗಯ್ಯ** : ಕ್ಷಮಿಸಬೇಕು ನಾನು ಕೇಳಿರುತಕ್ಕದ್ದು ತುಂಬಾ ಮುಖ್ಯವಾದ ಪ್ರಶ್ನೆ.

ಶ್ರೀ ಕೊಣಂದೂರು ಲಿಂಗಪ್ಪ : ಮಾನ್ಯಸಿದ್ದಲಿಂಗಯ್ಯನವರು ಒಂದು ವಿಷಯ ತಪ್ಪು ತಿಳಿದುಕೊಂಡಿದ್ದಾರೆ. ಅಜೀಜ್‌ಸೇಟ್ ರವರು ಈ ರಾಜ್ಯದಲ್ಲಿನ ಉರ್ದು ಪ್ರೈಮರಿ ಶಾಲೆಗಳಲ್ಲಿ ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು ಎಂದು ಹೇಳಿದ ವ್ಯಕ್ತಿ. ಅವರ ಬಗ್ಗೆ ಇವರು ಹಾಗೆ ಹೇಳಬಾರದು.

ಶ್ರೀ ಅಜೀಜ್‌ಸೇಟ್ : If you want business, don't bring politics.

**ಡಾ|| ಸಿದ್ದಲಿಂಗಯ್ಯ** : ಮಾನ್ಯ ಆಹಾರ ಸಚಿವರು ವಿಶೇಷ ಘಟಕ ಯೋಜನೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಖರ್ಚು ಮಾಡಿರುವ ಹಣವೆಷ್ಟು ಎಂಬುದನ್ನು ತಿಳಿಸಬೇಕು.

ಶ್ರೀ ಅಜೀಜ್‌ಸೇಟ್ : ತಾವು ಹೇಳುವ ಯೋಜನೆ ಯಾವುದು ಎಂದು ನನಗೆ ಗೊತ್ತಿಲ್ಲ. ಈ ಯೋಜನೆಗೂ ಇದಕ್ಕೂ ಸಂಬಂಧವಿಲ್ಲ.

**ಡಾ|| ಎಸ್. ಸಿದ್ಧಲಿಂಗಯ್ಯ** : ಇದು 20 ಕೋಟಿ ರೂಪಾಯಿಗಳ ಪ್ರಶ್ನೆ. ಇದನ್ನು ಸರಳವಾಗಿ ತೆಗೆದುಕೊಳ್ಳಬಾರದು.

ಶ್ರೀ ಅಜೀಜ್‌ಸೇಟ್ : ಸದಸ್ಯರಿಗೆ ಸಹನೆ ಇಲ್ಲದಿದ್ದರೆ ನಾನು ಏನೂ ಮಾಡಲು ಸಾಧ್ಯವಿಲ್ಲ. ಸದಸ್ಯರು ತಾಳ್ಮೆಯಿಂದ ವರ್ತಿಸಬೇಕು.

**ಡಾ|| ಸಿದ್ಧಲಿಂಗಯ್ಯ** : ಈ ಬಗ್ಗೆ ನನಗೆ ಉತ್ತರ ಬೇಕು. ನನಗೆ ಅನ್ನಿಸುತ್ತದೆ. ವಿಶೇಷ ಘಟಕ ಯೋಜನೆ ಬೋಗಸ್ ಯೋಜನೆಯೆಂದು. ಸರ್ಕಾರ ಮುದ್ರಣ ಮಾಡುವುದು ಒಂದು ಆಗುತ್ತಾ ಇರುವುದು ಒಂದು.

**ಶ್ರೀ ಕೆ.ಎಸ್. ನಾಗೇಗೌಡ** : ತಾವು 2 ರೂ. ಅಕ್ಕಿ ಕೆ.ಜಿ. ಏನಿದೆ ಅದರ ಬಲೆ ಜಾಸ್ತಿ ಮಾಡುತ್ತೀರಾ? ಎಂದು ಕೇಳಿದ್ದೇನೆ. ಜಾಸ್ತಿ ಮಾಡುತ್ತೀರಾ ಸಬ್ಸಿಡಿಯನ್ನು ಈ ಸರ್ಕಾರ ಏನು ಫುಡ್ ಕಾರ್ಪೋರೇಷನ್‌ಗೆ ಕೊಟ್ಟಿದೆ. ಆ ಸಬ್ಸಿಡಿ ಎಷ್ಟು ಬಾಕಿ ಇದೆ? ಯಾವಾಗ ತುಂಬುತ್ತೀರಿ. ದಯವಿಟ್ಟು ತಿಳಿಸಿ.

**ಶ್ರೀ ಅಜೀಜ್‌ಸೇಟ್**: ಮಾನ್ಯರೇ ತಮ್ಮ ವಿಶೇಷ ಅನುಮತಿ ಕೋರಿ ಈ ಕೆಳಕಂಡ ಹೇಳಿಕೆಯನ್ನು ನೀಡುತ್ತಿದ್ದೇನೆ.

ದಿನಾಂಕ 25.06.1990 ರಿಂದ ಭಾರತ ಸರ್ಕಾರವು ಅಕ್ಕಿಯ ಬೆಲೆಯನ್ನು ಹೆಚ್ಚಿಸಿದೆ. ಈಗ ರಾಜ್ಯ ಸರ್ಕಾರವು ಸಾರ್ವಜನಿಕ ಪಡಿತರ ವ್ಯವಸ್ಥೆಯ ಮೂಲಕ ಅತ್ಯುತ್ತಮ ಅಕ್ಕಿಯನ್ನು 3.65 ಕೆ.ಜಿ.ಗೆ ಉತ್ತಮ ಅಕ್ಕಿ 2.70 ಕೆ.ಜಿ. ನೀಡುತ್ತಿದೆ. ಭಾರತ ಸರ್ಕಾರ ಬೆಲೆಯೇರಿಸಿರುವುದರಿಂದ ಈ ರೀತಿಯಾಗಿ ಪಡಿತರ ವ್ಯವಸ್ಥೆಯ ಅಕ್ಕಿ ಬೆಲೆಯೇರಿಸಲಾಗಿದೆ. ಅತ್ಯುತ್ತಮ : ಉತ್ತಮ ಅಕ್ಕಿ ರೂ. 3.65 ಕೆ.ಜಿ. ಇಂದ 4.10 ಕೆ.ಜಿ., ಸಾಮಾನ್ಯ ಅಕ್ಕಿ 2.70 ಕೆ.ಜಿ. ಯಿಂದ 3.15 ಕೆ.ಜಿ.ಗೆ ಹಸಿರು ಕಾರ್ಡುದಾರರಿಗೆ ನೀಡಲಾಗುತ್ತಿರುವ ರೂ. 2 ಕೆ.ಜಿ. ಅಕ್ಕಿಯನ್ನು 2.50 ಕೆ.ಜಿ.ಗೆ ಏರಿಸಲಾಗಿದೆ.

ಭಾಗ-3

## ಶ್ರೀ ಅಜೀಜ್ ಸೇಟ್ ಅವರ ಜೀವನದ ಮುಖ್ಯ ಘಟನೆಗಳು

ದಿನಾಂಕ : 1ನೇ ಜನವರಿ 1921ರಂದು ಮೈಸೂರಿನಲ್ಲಿ ಜನನ.

| | | |
|---|---|---|
| 1946 | : | ರಾಜಕೀಯ ಪ್ರವೇಶ |
| 1948 | : | ಊಟಿ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರ ಮಗಳಾದ ಜುಬೇದಾಬಾಯಿ ಜೊತೆ ವಿವಾಹ |
| 1952 | : | ಮೈಸೂರು ಜಿಲ್ಲಾ ಬೀಡಿ ಮಜ್ದೂರ್ ಫೆಡರೇಷನ್ ಸ್ಥಾಪಕ ಅಧ್ಯಕ್ಷರು |
| 1953 | : | ಮೈಸೂರು ನಗರಸಭೆಯ ಸದಸ್ಯತ್ವ ಮಂಡಿಮೊಹಲ್ಲ ಕ್ಷೇತ್ರ |
| 1953-19 | : | ಮೈಸೂರು ನಗರ ಸಭೆಯ ಸದಸ್ಯ |
| 1960 | : | ಮೈಸೂರು, ಮಂಡ್ಯ, ಕೊಡಗು, ಹಾಸನವನ್ನೊಳಗೊಂಡ ಸ್ಥಳೀಯ ಸಂಸ್ಥೆಗಳ ಪರವಾಗಿ ವಿಧಾನಪರಿಷತ್‌ಗೆ ಚುನಾಯಿತನಾದ ಪ್ರಥಮ ಮುಸ್ಲಿಂ ಸದಸ್ಯ |
| 1960-1966 | : | ವಿಧಾನ ಪರಿಷತ್ ಸದಸ್ಯತ್ವ |
| 1960 | : | ಮಜ್ಲಿಸ್-ಇ-ರಿಫಾಹುಲ್ ಮುಸ್ಲಿಮಾನ್ ಶಿಕ್ಷಣ ಸಂಸ್ಥೆಯ ಆರಂಭ |
| 1962 | : | ಮಸ್ಲಿಸ್-ಇ-ರಿಫಾಹುಲ್ ಮುಸ್ಲಿಮಾನ್ ಶಿಕ್ಷಣ ಸಂಸ್ಥೆಯ ಅಧ್ಯಕ್ಷತೆ |
| 1967 | : | ನಾಲ್ಕನೇ ವಿಧಾನಸಭೆಗೆ ನರಸಿಂಹರಾಜಕ್ಷೇತ್ರದಿಂದ ಪಕ್ಷೇತರ ಅಭ್ಯರ್ಥಿಯಾಗಿ ಆಯ್ಕೆ |
| 15.3.67 | : | ಎ.ಜೆ. ದೊಡ್ಡಮೇಟಿಯವರ ಸಮ್ಮುಖದಲ್ಲಿ ವಿಧಾನಸಭೆಯ ಸದಸ್ಯರಾಗಿ ಪ್ರಮಾಣವಚನ |
| 24.3.72 | : | ಶ್ರೀ ತಾರೇ ಗೌಡರವರ ಸಮ್ಮುಖದಲ್ಲಿ 5ನೇ ವಿಧಾನಸಭೆಗೆ ನರಸಿಂಹರಾಜಕ್ಷೇತ್ರದಿಂದ ಆಯ್ಕೆಯಾಗಿ ಪ್ರಮಾಣವಚನ. ಕಾಂಗ್ರೆಸ್ ಅಭ್ಯರ್ಥಿಯಾಗಿ |
| 1972 ಡಿಸೆಂಬರ್ | : | ಸಾರಿಗೆ, ಪ್ರವಾಸೋದ್ಯಮ, ಕಾರ್ಮಿಕ ಹಾಗೂ ವಕ್ಫ್ ಖಾತೆ ಸಚಿವರಾಗಿ ಅಧಿಕಾರ ಸ್ವೀಕಾರ |

| | | |
|---|---|---|
| 1973-1977 | : | ಕರ್ನಾಟಕ ಪ್ರವಾಸೋದ್ಯಮ ಇಲಾಖೆಯ ಅಧ್ಯಕ್ಷ |
| 1978 | : | ಆರನೇ ವಿಧಾನಸಭೆಗೆ ಆಯ್ಕೆ ನರಸಿಂಹರಾಜಕ್ಷೇತ್ರದಿಂದ |
| ಮಾರ್ಚ್ 1978 | : | ಕೈಗಾರಿಕೆ ವಾಣಿಜ್ಯ ಮತ್ತು ವಕ್ಫ್ ಖಾತೆ ಸಚಿವರಾಗಿ ಅಧಿಕಾರ |
| ಡಿಸೆಂಬರ್ 1979 | : | ಗೋಕಾಕ್‌ವರದಿ ಜಾರಿಗೆ ಪ್ರತಿಭಟಿಸಿ ಸಚಿವ ಸಂಪುಟಕ್ಕೆ ರಾಜೀನಾಮೆ |
| 1979-1982 | : | ಮತ್ತು ಕಾಂಗ್ರೆಸ್ ಪಕ್ಷದಿಂದ ಹೊರಕ್ಕೆ ಕ್ರಾಂತಿರಂಗ ಸೇರ್ಪಡೆ |
| ಅಕ್ಟೋಬರ್ | : | ಶಾಸನ ಸಭೆಯಲ್ಲಿ ಶಾಸಕರಾಗಿ ಕಾರ್ಯನಿರ್ವಹಣೆ |
| 1983-ಫೆಬ್ರವರಿ | : | ಏಳನೇ ವಿಧಾನಸಭೆಗೆ ಜನತಾ-ಕ್ರಾಂತಿರಂಗ ಪಕ್ಷದಿಂದ ಆಯ್ಕೆ |
| 1989-84 ಜುಲೈ | : | ಕಾರ್ಮಿಕ ಹಾಗೂ ವಕ್ಫ್ ಖಾತೆ ಸಚಿವರಾಗಿ ಅಧಿಕಾರ ಸ್ವೀಕಾರ |
| 1984 ಜುಲೈ | : | ಶಿಕ್ಷಣ ನೀತಿಯನ್ನು ಪ್ರತಿಭಟಿಸಿ ಸಚಿವ ಸಂಪುಟಕ್ಕೆ ರಾಜೀನಾಮೆ |
| 15.10.1984 | : | ಶ್ರೀಮತಿ ಇಂದಿರಾಗಾಂಧಿಯವರ ಬೆಂಗಳೂರು ಭೇಟಿ ಸಂದರ್ಭದಲ್ಲಿ ಕಾಂಗ್ರೆಸ್ ಪಕ್ಷ ಮರಳಿ ಸೇರ್ಪಡೆ |
| 1984 | : | ಅಧ್ಯಕ್ಷರು, ಮೈಸೂರು ಜಿಲ್ಲಾ ಬೀಡಿ ಕಾರ್ಮಿಕರ ಸಹಕಾರ ಗೃಹ ನಿರ್ಮಾಣ ಸಂಘ |
| 1984 | : | ಧಾರವಾಡ ದಕ್ಷಿಣ ಕ್ಷೇತ್ರದಿಂದ ಕಾಂಗ್ರೆಸ್ (ಐ) ಅಭ್ಯರ್ಥಿಯಾಗಿ ಲೋಕಸಭೆಗೆ ಪ್ರವೇಶ |
| 1984-1989 | : | ಅಧ್ಯಕ್ಷರು ಕಾಂಗ್ರೆ ಪಕ್ಷದ ಅಖಿಲ ಭಾರತ ಅಲ್ಪ ಸಂಖ್ಯಾತರ ವಿಭಾಗ |
| 1988 ಡಿಸೆಂಬರ್ | : | ಸಿಖ್ ಬ್ರದರ್ಸ್ ಸಂಸ್ಥೆಯಿಂದ ಉತ್ತಮ ರಾಷ್ಟ್ರಸೇವೆಗಾಗಿ ಶಿರೋಮಣಿ ಪ್ರಶಸ್ತಿ ಪ್ರಧಾನ. ಲೋಕಸಭಾಧ್ಯಕ್ಷ ಶ್ರೀ ಬಲರಾಂ ಜಾಖರ್‌ರಿಂದ |
| 1989 ನವೆಂಬರ್ | : | 9ನೇ ವಿಧಾನಸಭೆಗೆ ನರಸಿಂಹರಾಜ ಕ್ಷೇತ್ರದಿಂದ ಮರು ಆಯ್ಕೆ |
| 1989 ಡಿಸೆಂಬರ್ | : | ವೀರೇಂದ್ರ ಪಾಟೀಲ್ ಸಂಪುಟದಲ್ಲಿ ಕಂದಾಯ ಸಚಿವರು |

18.10.1990 : ಬಂಗಾರಪ್ಪ ಮಂತ್ರಿಮಂಡಲದಲ್ಲಿ ಸಾರಿಗೆ, ನಾಗರೀಕ ಪೂರೈಕೆ ಮತ್ತು ವಕ್ಫ್ ಸಚಿವರಾಗಿ ಅಧಿಕಾರ

1994 : ನರಸಿಂಹರಾಜ ಕ್ಷೇತ್ರದಿಂದ ಭಾ.ಜ.ಪ. ಅಭ್ಯರ್ಥಿಯವರು ಪರಾಭವ. ಕಾಂಗ್ರೆ ಅಧಿಕೃತ ಅಭ್ಯರ್ಥಿಯಾಗಿದ್ದರೂ ಕೊನೆಗಳಿಗೆಯಲ್ಲಿ ಪಕ್ಷದ 'ಬಿ' ಫಾರಂ ಸಿಗದೇ ಗಡಿಯಾರ ಚಿಹ್ನೆಯಿಂದ ಸ್ಪರ್ಧೆ ಕೇವಲ 1,500 ಮತಗಳಂತರದಲ್ಲಿ ಸೋಲು.

1999 : ಜನರ ಒತ್ತಾಯದ ಮೇರೆಗೆ ರಾಜಕೀಯ ನಿವೃತ್ತಿ ಹಿಂತೆಗೆತ. ಚುನಾವಣೆ ಸ್ಪರ್ಧೆ. ನರಸಿಂಹರಾಜಕ್ಷೇತ್ರದಿಂದ ಕಾಂಗ್ರೆ ಅಭ್ಯರ್ಥಿಯಾಗಿ ವಿಜಯ.

25.10.1999 : ಹಂಗಾಮಿ ಸಭಾಧ್ಯಕ್ಷರಾಗಿ ರಾಜ್ಯಪಾಲರಿಂದ ಪ್ರಮಾಣ ವಚನ. ನೂತನ ಸದಸ್ಯರಿಗೆ ಪ್ರಮಾಣ ವಚನ ಬೋಧನೆ.

## ಭಾಗ-4

## ಸಂದರ್ಶನ

### ದಿನಾಂಕ 05.07.1999ರಂದು ಶ್ರೀಮಾನ್ ಅಜೀಜ್‌ಸೇಟ್‌ರನ್ನು ಅವರ ಸ್ವಗೃಹದಲ್ಲಿ ಭೇಟಿಯಾಗಿ ನಡೆಸಿದ ಸಂದರ್ಶನ

ಪ್ರಶ್ನೆ : ನಿಮ್ಮ ರಾಜಕೀಯ ಪ್ರವೇಶ ಹೇಗೆ ಆಯಿತು ? ಸ್ವಲ್ಪ ವಿವರವಾಗಿ ತಿಳಿಸುತ್ತೀರಾ.

ಶ್ರೀ ಅಜೀಜ್‌ಸೇಟ್ : ನಾನು ಶ್ರೀಮಂತ ಕುಟುಂಬದಿಂದ ಬಂದವನು. ನಮ್ಮ ತಂದೆ ಅಬ್ದುಲ್ ಸತ್ತಾರ್‌ಸೇಟ್. ಮೈಸೂರಿನಲ್ಲಿರುವ ಕ್ಲಾಕ್ ಟವರ್‌ನ ಮುಂಭಾಗದ ಲಕ್ಷ್ಮೀ ಕಾಂಪ್ಲೆಕ್ಸ್‌ನಲ್ಲಿ ನಮ್ಮ ಬಹುವಸ್ತು ಮಳಿಗೆ (ಡಿಪಾರ್ಟ್‌ಮೆಂಟಲ್ ಸ್ಟೋರ್ಸ್) ಇತ್ತು. ನಮ್ಮದು ಅವಿಭಕ್ತ ಕುಟುಂಬ. ಹದಿನೇಳು ವರ್ಷಗಳ ಕಾಲ ಅಂಗಡಿಯ ವ್ಯಾಪಾರದಲ್ಲಿ ಮಾತ್ರ ಗಮನಿಸಿಕೊಂಡಿದ್ದೆ. 1952ರಲ್ಲಿ ಮಂಡಿಮೊಹಲ್ಲ ಪ್ರದೇಶದಿಂದ ಅಡ್ವೋಕೇಟ್‌ರಾಗಿದ್ದ ಮಹಮದ್ ಷರೀಫ್ ನಿಂತಿದ್ದರು. ಪ್ರಥಮ ಬಾರಿಗೆ ಅವರ ಪರವಾಗಿ ಚುನಾವಣೆ ಪ್ರಚಾರದಲ್ಲಿ ತೊಡಗಿದೆ. ಅವರ ವಿರುದ್ಧ ನಿಂತಿದ್ದವರು ಟಿ. ಮರಿಯಪ್ಪನವರು. ಮಹಮದ್ ಷರೀಫ್ ಚುನಾವಣೆ ಸೋತರು. ಆದರೆ ಆ ಸಂದರ್ಭದಲ್ಲಿ ನನಗೊಂದು ಯೋಚನೆ ಬಂತು. ಯಾವುದೇ ಸಂಘಟಿತ ವ್ಯವಸ್ಥೆಯೇ ಜನಜಾಗೃತಿಗೆ ದಾರಿಯೆಂದು ಯೋಚಿಸಿ ಚುನಾವಣೆ ಸಮಯದಲ್ಲಿ ಬೀಡಿ ಕಾರ್ಮಿಕರಿಗೆ ನೀಡಿದ ಆಶ್ವಾಸನೆಯನ್ನು ಕಾರ್ಯಗತಗೊಳಿಸಲು ಆಲೋಚಿಸಿ ಕಾರ್ಯಪ್ರವೃತ್ತನಾದೆ. ಆ ಸಂದರ್ಭದಲ್ಲಿ ಮೈಸೂರು ನಗರದ ಬೀಡಿ ಕಾರ್ಮಿಕರಿಗೆ ಒಂದು ರೂ. 40 ಪೈಸೆ ಕೂಲಿ ಸಿಗುತ್ತಿತ್ತು. ಗ್ರಾಮೀಣ ಪ್ರದೇಶದ ಬೀಡಿ ಕಾರ್ಮಿಕರಿಗೆ ಒಂದು ರೂಪಾಯಿಗಿಂತ ಕಡಿಮೆ. ಈ ಹಿನ್ನೆಲೆಯಲ್ಲಿ ಬೀಡಿ ಕಾರ್ಮಿಕರಲ್ಲಿ ಸಂಘಟನೆ ಮಾಡಲು ನಿರ್ಧರಿಸಿದೆ. ಆ ವೇಳೆಗಾಗಲೇ ಅವರಲ್ಲಿ 5 ಕಾರ್ಮಿಕ ಸಂಘಟನೆಗಳಿದ್ದವು. ಅವುಗಳೆಲ್ಲವನ್ನೂ ವಿಸರ್ಜಿಸಿ ಆ ಜಾಗದಲ್ಲಿ ಮೈಸೂರು ಜಿಲ್ಲಾ ಬೀಡಿ ಮಜ್ದೂರ್ ಫೆಡರೇಷನ್‌ನ್ನು 1952ರಲ್ಲಿ ಆರಂಭಿಸಿದೆವು. ಅದರ ಸ್ಥಾಪಕ ಅಧ್ಯಕ್ಷನಾಗಿ ಆರಂಭಿಸಿದ ಈ ಫೆಡರೇಷನ್ ಮುಖಾಂತರ ಬೀಡಿ ಕಾರ್ಮಿಕರ ಚಳುವಳಿ ಆರಂಭವಾಯಿತು. ತೀರಾ ವಿಭಿನ್ನವಾದ ಈ ಚಳುವಳಿಯಲ್ಲಿ ಬೀಡಿ ಕಾರ್ಮಿಕರು ಎಂದಿನಂತೆ ಕಾರ್ಯನಿರತರಿದ್ದರೆ ಅದರ ಅಧ್ಯಕ್ಷನಾದ ನಾನು ಸತ್ಯಾಗ್ರಹಗಳ ಮುಖಾಂತರ ಸಮಸ್ಯೆಗಳತ್ತ ಮಾಲೀಕರ ಗಮನ ಸೆಳೆಯಲಾರಂಭಿಸಿದೆ. ಈ ಸಂದರ್ಭದಲ್ಲಿ ನಾನು ಚುನಾವಣೆಗೆ ಪ್ರಚಾರ ಮಾಡಿದ್ದ ಶ್ರೀ ಮಹಮದ್ ಷರೀಫರು ಮಾಲೀಕರ ಪರವಾಗಿದ್ದರು. ಆದರೂ ಚಿಂತಿಸದೇ ಆರಂಭಿಸಿದ ಈ ಹೋರಾಟ ಬೀಡಿ ಮಾಲಿಕರ ಮನಪರಿವರ್ತನೆಗೆ ದಾರಿ ಮಾಡಿತ್ತು. ಗ್ರಾಮೀಣ ಪ್ರದೇಶದ ಕಾರ್ಮಿಕರಿಗೂ ನಗರ ಪ್ರದೇಶದ ಕಾರ್ಮಿಕರಷ್ಟೆ ಮಜೂರಿ ಲಭಿಸಲಾರಂಭಿಸಿತು. 1952ರಲ್ಲಿ ಕೇವಲ 1 ರೂ. ಪಡೆಯುತ್ತಿದ್ದ ಬೀಡಿ ಕಾರ್ಮಿಕ ಈಗ ಪ್ರತಿ ಸಾವಿರ ಬೀಡಿ ಕಟ್ಟಲು 55-00 ರೂ. ಗಳನ್ನು ಪಡೆಯುತ್ತಿದ್ದಾನೆ.

ನಂತರ 1953ರಲ್ಲಿ ಮೈಸೂರು ನಗರಸಭೆಗೆ ಚುನಾವಣೆ ಘೋಷಣೆಯಾಯಿತು. ಮಂಡಿಮೊಹಲ್ಲ ಕ್ಷೇತ್ರದಿಂದ ಪಕ್ಷೇತರವಾಗಿ ಸ್ಪರ್ಧಿಸಿ ನಗರಸಭೆಗೆ ಚುನಾಯಿತನಾದೆ. ಈ ಮುಖಾಂತರ ನನ್ನ ರಾಜಕೀಯ ಜೀವನ ಆರಂಭವಾಯಿತು. ನಂತರ 1960ರಲ್ಲಿ ಮೈಸೂರು ವಿಭಾಗದಿಂದ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಯಾಗಿ ವಿಧಾನಪರಿಷತ್ ಪ್ರವೇಶಿಸಿದೆ. (ಕೊಡಗು, ಮಂಡ್ಯ, ಮೈಸೂರು, ಹಾಸನ) ಈ ಪ್ರಾಂತಗಳ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಯಾಗಿ ಚುನಾಯಿತನಾದ ಪ್ರಥಮ ಮುಸ್ಲಿಂ ಅಭ್ಯರ್ಥಿಯಾಗಿ ವಿಧಾನಪರಿಷತ್ ಪ್ರವೇಶಿಸಿದೆ.

1967ರಲ್ಲಿ ಮೈಸೂರಿನ ನರಸಿಂಹರಾಜ ಕ್ಷೇತ್ರದಿಂದ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಪ್ರಥಮ ಬಾರಿಗೆ ವಿಧಾನ ಸಭೆ ಪ್ರವೇಶಿಸಿದೆ. ಸೋಷಿಯಲಿಸ್ಟ್ ಪಕ್ಷದ ಪರವಾಗಿ ವಿಧಾನಸಭೆಯಲ್ಲಿ ಶಾಸಕನಾಗಿ ಕಾರ್ಯನಿರ್ವಹಿಸಿದೆ.

ಪ್ರಶ್ನೆ : ನೀವು ಸಚಿವರಾಗಿದ್ದಾಗ ಸಾರಿಗೆ ಹಲವು ಮಾರ್ಗಗಳ ರಾಷ್ಟ್ರೀಕರಣ ಮಾಡಿದ್ದೀರಿ, ಇಂದಿನ ದೇವರಬೆಳಗೆರೆ ಪ್ರಕರಣದಂತಹ ಹಲವು ಘಟನೆಗಳ ಹಿನ್ನೆಲೆಯಲ್ಲಿ ನಿಮ್ಮ ನಿರ್ಧಾರ ಸರಿಯೆಂದು ಭಾವಿಸುತ್ತೀರಾ ?

ಶ್ರೀ ಅಜೀಜ್‌ಸೇಟ್ : ರಾಷ್ಟ್ರೀಕರಣದ ನಿರ್ಧಾರ ಶ್ರೀ ದೇವರಾಜ ಅರಸುರವರ ಸಂದರ್ಭದಲ್ಲಿ ತೆಗೆದುಕೊಂಡಿದ್ದು. ನೆರೆರಾಜ್ಯಗಳಿಗೆ ಹೋಲಿಸಿದರೆ ನಮ್ಮ ಸಾರಿಗೆ ವ್ಯವಸ್ಥೆ ಉತ್ತಮವಾಗಿದೆ. ನಾನು ಸಾರಿಗೆ ಸಚಿವನಾಗಿದ್ದಾಗ ಯಾವುದೇ ದೂರುಗಳು ಬಂದರೂ ವೈಯುಕ್ತಿಕವಾಗಿ ಅದನ್ನು ಗಮನಿಸುತ್ತಿದ್ದೆ. ಆ ಸಮಸ್ಯೆಗೆ ಪರಿಹಾರ ಹುಡುಕುವತ್ತ ತೀವ್ರ ಗಮನ ಕೊಡುತ್ತಿದ್ದೆ. ಯಾವುದೇ ಸಂದರ್ಭದಲ್ಲೂ ನಾನು ಸಮಸ್ಯೆಗೆ ನೀಡುತ್ತಿದ್ದ ಗಮನ ಸಾರಿಗೆ ಸಂಸ್ಥೆಯನ್ನು ನಷ್ಟದಿಂದ ಮುಕ್ತ ಮಾಡಿತ್ತು. ಅದೇ ಸಂದರ್ಭದಲ್ಲಿ ನಾನು ಪ್ರವಾಸೋದ್ಯಮ ವಿಭಾಗದಲ್ಲೂ ಅಧ್ಯಕ್ಷನಾಗಿದ್ದು ಪ್ರವಾಸ ಉದ್ದೇಶದಿಂದ 18 ಸಾರಿಗೆ ಬಸ್‌ಗಳನ್ನು ಪ್ರವಾಸೋದ್ಯಮ ಅಭಿವೃದ್ಧಿಗೆ ನೀಡಿದೆ. ಪ್ರವಾಸಿ ಕ್ಷೇತ್ರಗಳ ಸೌಲಭ್ಯಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ಮಾಡಿದ್ದೇನೆ.

ಪ್ರಶ್ನೆ : ನೀವು ಮಾನ್ಯ ನಿಜಲಿಂಗಪ್ಪನವರಿಂದ ಶ್ರೀ ವೀರಪ್ಪಮೊಯಿಲಿಯವರ ತನಕ ಹಲವಾರು ಮುಖ್ಯಮಂತ್ರಿಗಳ ಜೊತೆ ಶಾಸಕರಾಗಿ, ಸಚಿವರಾಗಿ ಕಾರ್ಯನಿರ್ವಹಿಸಿದ್ದೀರಿ. ಇವರಲ್ಲಿ ಯಾರ ಆಡಳಿತ ವೈಖರಿ ನಿಮಗೆ ಹಿಡಿಸಿತು ? ಸಹಸಚಿವರೊಂದಿಗೆ ಅವರ ವರ್ತನೆಗಳು ಹೇಗಿದ್ದವು ?

ಶ್ರೀ ಅಜೀಜ್‌ಸೇಟ್ : ನಾನು ಕಡಿದಾಳ್ ಮಂಜಪ್ಪ, ನಿಜಲಿಂಗಪ್ಪ, ದೇವರಾಜ್ ಅರಸ್‌ರವರನ್ನು ತುಂಬಾ ಮೆಚ್ಚುತ್ತೇನೆ. ವೀರೇಂದ್ರಪಾಟೀಲ್ ಪರವಾಗಿಲ್ಲ. ರಾಮಕೃಷ್ಣ ಹೆಗಡೆ ವಿಭಿನ್ನ ಮನೋಭಾವದವರು. ಕಡಿದಾಳ್ ಮಂಜಪ್ಪ ತುಂಬಾ ಪ್ರಾಮಾಣಿಕ, ಅನುಭವಿ ಆಡಳಿತಗಾರ. ನಿಜಲಿಂಗಪ್ಪ ಸ್ವಾತಂತ್ರ್ಯ ಹೋರಾಟಗಾರರು, ಬುದ್ಧಿಜೀವಿ. ದೇವರಾಜ್

ಅರಸುರವರು ನೈಜ ಸಾಮಾಜಿಕ ಕಳಕಳಿಯಿದ್ದವರು, ಮುಖ್ಯಮಂತ್ರಿಯಾಗಿದ್ದಾಗಲೂ ತಮ್ಮ ಊರಿಗೆ ಬಂದಾಗ ಹೊಲವನ್ನು ಉಳುತ್ತಿದ್ದ ವ್ಯಕ್ತಿ. ಬಂಗಾರಪ್ಪ ಮತ್ತು ನನ್ನ ನಡುವೆ ಯಾವ ಭಿನ್ನಾಭಿಪ್ರಾಯವೂ ಇರಲಿಲ್ಲ, ನಾವಿಬ್ಬರೂ ಉತ್ತಮ ಗೆಳೆಯರಾಗಿದ್ದೆವು.

ಪ್ರಶ್ನೆ : ಲೋಕಸಭೆಯಲ್ಲಿ ನಿಮ್ಮ ಅನುಭವ ಹೇಗೆ ?

ಶ್ರೀ ಅಜೀಜ್‌ಸೇಟ್ : ತುಂಬಾ ವಿಭಿನ್ನವಾದುದು. ಅಲ್ಲಿ ಯಾವ ಮಂತ್ರಿಯನ್ನು ನೋಡಲು ಸಾಧ್ಯವಾಗುತ್ತಿರಲಿಲ್ಲ. ಯಾವುದೇ ಕೆಲಸವಾಗುವಾಗಲೂ ಹಲವು ಅಡ್ಡಿ ಆತಂಕ. ಅಂತಹ ಸಮಯದಲ್ಲಿ ನಾನು ಶ್ರೀ ರಾಜೀವಗಾಂಧಿಯವರಿಗೆ ನನಗೆ ರಾಷ್ಟ್ರ ರಾಜಕೀಯ ಬೇಡ, ನನ್ನ ಜನರಿಗಾಗಿ ಏನೂ ಮಾಡಲಾಗುತ್ತಿಲ್ಲ, ರಾಜ್ಯದ ರಾಜಕೀಯಕ್ಕೆ ಮರಳುತ್ತೇನೆ ಎಂದಿದ್ದೆ. ಈ ಸಂದರ್ಭದಲ್ಲಿ ನಡೆದ ಒಂದು ಘಟನೆಯೆಂದರೆ ಕಾಶ್ಮೀರಕ್ಕೆ ಸಂಬಂಧಿಸಿದ್ದು. ಆಗ ರಾಜೀವ ಗಾಂಧಿ ಯವರಿಗೂ ಶ್ರೀ ಫಾರೂಕ್ ಅಬ್ದುಲ್ಲರಿಗೂ ಅಂತಹ ಸಾಮರಸ್ಯವಿರಲಿಲ್ಲ. ಇದನ್ನು ಬಗೆಹರಿಸಲು ನಾನು ನೇರವಾಗಿ ಫಾರೂಕ್ ಅಬ್ದುಲ್ಲಾರನ್ನು 1985ರ ಮೇ 3 ರಂದು ಭೇಟಿಯಾದೆ. ಒಂದು ತಾಸಿನ ಮಾತುಕತೆಯ ನಂತರ ಫಾರೂಕ್ ಅಬ್ದುಲ್ಲಾ ನವದೆಹಲಿಗೆ ಬರಲು ಒಪ್ಪಿದರು. ಆಗ ಅವರ ತಾಯಿಯವರನ್ನೂ ಕರೆತರಲು ತಿಳಿಸಿದೆ. ಏಕೆಂದರೆ ನೆಹರೂ ಕುಟುಂಬ ಮತ್ತು ಅಬ್ದುಲ್ಲಾ ಕುಟುಂಬ ತುಂಬಾ ಆತ್ಮೀಯವಾದುದು. 5ನೇ ಮೇ ರಂದು ನವದೆಹಲಿಗೆ ಬಂದ ಡಾ|| ಅಬ್ದುಲ್ಲಾ ರಾಜೀವ ಗಾಂಧಿಯವರನ್ನು ಭೇಟಿಯಾದರು. ನನ್ನ ರಾಯಭಾರ ಯಶಸ್ವಿಯಾದ ಬಗ್ಗೆ ನನಗೆ ಸಂತಸವೆನಿಸಿತು. ಆದರೆ ಕಾಶ್ಮೀರದ ಭೇಟಿಗೆ ಹೋದ ರಾಜೀವ ಗಾಂಧಿಯವರು ನನ್ನನ್ನು ಬಿಟ್ಟು ಮತ್ತಿತರರನ್ನು ಕರೆದೊಯ್ದದ್ದು ಬೇಸರವುಂಟುಮಾಡಿತು.

ಪ್ರಶ್ನೆ : ಕಳೆದ ಐವತ್ತು ವರ್ಷಗಳಲ್ಲಿ ನೆರೆರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕ ಪ್ರಗತಿ ಸಾಧಿಸಿದೆಯೇ ? ಅದು ನಿಮಗೆ ತೃಪ್ತಿಕರವೆನಿಸಿದೆಯೆ ?

ಶ್ರೀ ಅಜೀಜ್‌ಸೇಟ್ : ನನಗೆ ಬೇರೆ ರಾಜ್ಯಗಳ ಆರ್ಥಿಕ ಸ್ಥಿತಿ ಗೊತ್ತಿಲ್ಲ. ಮೊದಲು 9 ಜಿಲ್ಲೆಗಳಿದ್ದ ಕರ್ನಾಟಕ ರಾಜ್ಯ ಈಗ 27 ಜಿಲ್ಲೆಗಳಾಗಿವೆ. ಬೆಳವಣಿಗೆಯೂ ಆಗಿದೆ. ಕೃಷಿ, ಆರ್ಥಿಕ ಅಭಿವೃದ್ಧಿ, ಕಂಪ್ಯೂಟರ್ಸ್, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಗಮನಾರ್ಹವಾದ ಪ್ರಗತಿ ಸಾಧಿಸಲಾಗಿದೆ.

ಪ್ರಶ್ನೆ : ಇತರ ರಾಜ್ಯಗಳ ಮುಸ್ಲಿಂ ಸಮುದಾಯದ ಸ್ಥಿತಿಗತಿಗೆ ಹೋಲಿಸಿದರೆ ಕರ್ನಾಟಕದಲ್ಲಿ ಮುಸ್ಲಿಮರ ಸ್ಥಿತಿಯ ಸುಧಾರಣೆಯಾಗಿದೆಯೆ ?

ಶ್ರೀ ಅಜೀಜ್‌ಸೇಟ್ : ಖಂಡಿತಾ ಆಗಿದೆ. ಕರ್ನಾಟಕ ರಾಜ್ಯದಲ್ಲಿ ವಕ್ಫ್ ಮಂಡಲಿಯಿರುವುದರಿಂದ ಮುಸ್ಲಿಮರ ಆರ್ಥಿಕ ಸ್ಥಿತಿಯಲ್ಲಿ ಸುಧಾರಣೆಯಾಗಿದೆ. ಜೊತೆಗೆ

ನಾನು ವಕ್ಫ್ ಡೆವಲಪ್‌ಮೆಂಟ್ ಕಾರ್ಪೊರೇಷನ್ ಎಂಬ ಸಂಸ್ಥೆಯನ್ನು ಆರಂಭಿಸಿದ್ದೇನೆ. ಅದರ ಮೂಲ ಬಂಡವಾಳ ಮೂವತ್ತೆರಡು ಲಕ್ಷ ರೂಪಾಯಿ ಬರುವಂತಹ ಕಾರ್ಯಗಳಿಗೆ ಇದರ ಮೂಲಕ ಧನಸಹಾಯ ಮಾಡಿದ್ದೇವೆ. ಇದರಿಂದ ಎಷ್ಟೋ ಮುಸ್ಲಿಮ್ ಕುಟುಂಬದವರು ಆರ್ಥಿಕವಾಗಿ ಅನುಕೂಲತೆಯನ್ನು ಕಂಡಿದ್ದಾರೆ.

ಪ್ರಶ್ನೆ : ನೀವು ಬೀಡಿ ಕಾರ್ಮಿಕರ ಸಮಸ್ಯೆಯನ್ನು ಕೈಗೆತ್ತಿಕೊಂಡು ರಾಜಕೀಯ ರಂಗದಲ್ಲಿ ಹೋರಾಟದೊಂದಿಗೆ ಆರಂಭಿಸಿದಿರಿ. ಇದೀಗ ಅವರ ಪರಿಸ್ಥಿತಿ ಸುಧಾರಿಸಿದೆಯೆ ?

ಶ್ರೀ ಅಜೀಜ್‌ಸೇಟ್ : ನಾನು ಮೊದಲೇ ಹೇಳಿದಂತೆ ಬೀಡಿ ಕಾರ್ಮಿಕರಿಗೆ ಸಿಗುತ್ತಿದ್ದ ಮಜೂರಿ ಕೇವಲ 1 ರೂ 10 ಪೈಸೆ ಮಾತ್ರ. ಈ ಹಂತದಲ್ಲಿ ಬೀಡಿ ಕಾರ್ಮಿಕರ ಸಂಘಟನೆಯನ್ನು ಮೈಸೂರು ಜಿಲ್ಲಾಬೀಡಿ ಮಜ್ದೂರ್ ಫೆಡರೇಷನ್‌ನ ಮುಖಾಂತರ ಆರಂಭಿಸಿದೆ. ಆ ಮುಖಾಂತರ ಬೀಡಿ ಕಾರ್ಮಿಕರ ವೆಲ್‌ಫೇರ್‌ನೆಸ್ ಫಂಡ್ ಎಂಬ ವಿನೂತನ ಕಾರ್ಯವನ್ನು ಆರಂಭಿಸಿ ರಾಷ್ಟ್ರಾದ್ಯಂತ ಇರುವ 4,00,000 ಕ್ಕೂ ಹೆಚ್ಚು ಬೀಡಿ ಕಾರ್ಮಿಕರಿಗೆ ಉಚಿತ ವೈದ್ಯಕೀಯ ಸೌಲಭ್ಯ, ಸಾಕ್ಷರತಾ ಶಿಕ್ಷಣ ಇತ್ಯಾದಿಗಳನ್ನು ನೀಡಲಾಯಿತು. ಬೀಡಿ ಕಾರ್ಮಿಕರ ಸಹಕಾರ ಸೊಸೈಟಿಯನ್ನು ಆರಂಭಿಸಿ ಆ ಮುಖಾಂತರ ಕಾರ್ಮಿಕರ ಸ್ವಂತ ಮನೆ ಕಟ್ಟಲು ಅನುಕೂಲ ಮಾಡಲಾಯಿತು. ಪ್ರಾರಂಭದಲ್ಲಿ ಮನೆ ನಿರ್ಮಾಣಕ್ಕೆ 3,000-00 ಸಹಾಯಧನ ನೀಡಲಾಗುತ್ತಿತ್ತು. ನಂತರ ಅದು 5,000-00 ಕ್ಕೆ ಹೆಚ್ಚಿಸಿ ಈಗ ರೂ. 10,000-00 ಗಳನ್ನು ಸಹಾಯಧನವಾಗಿ ನೀಡಲಾಗುತ್ತಿದೆ. ಈ ಗಾಗಲೇ 3,000 ಹೆಚ್ಚು ಜನ ಈ ಯೋಜನೆಯಲ್ಲಿ ಮನೆ ನಿರ್ಮಿಸಿಕೊಂಡಿದ್ದಾರೆ. ಅಜೀಜ್‌ಸೇಟ್ ನಗರದಲ್ಲಿ 1,000 ಹೆಚ್ಚು ಜನ ಮನೆಯನ್ನು ಹೊಂದಿದ್ದಾರೆ. ತಾವು ಪಡೆದ ಸಾಲದ ಶೇಕಡಾ 60-80ರಷ್ಟು ಭಾಗದ ಮರುಪಾವತಿಯಾಗಿದೆ. ಪ್ರತಿಯೊಂದು ಮನೆಯಲ್ಲೂ ದೂರದರ್ಶನದ ಸೆಟ್‌ಗಳು ಬಂದಿದೆ. ಪ್ರತಿಯೊಬ್ಬರೂ ಆರ್ಥಿಕವಾದ ಪ್ರಗತಿಯನ್ನು ಸಾಧಿಸುತ್ತಿದ್ದಾರೆ. ತಮ್ಮ ಕಾರ್ಯವನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಮುಂಚೆ ಬೀಡಿ ಕಾರ್ಮಿಕ ತಾನು ಬೀಡಿ ಕಾರ್ಮಿಕನೆಂದು ಹೇಳಲು ನಾಚಿಕೆ ಪಡುತ್ತಿದ್ದ. ಈಗ ಪರಿಸ್ಥಿತಿ ಬದಲಾಗಿದೆ. ಬೀಡಿ ಕಾರ್ಮಿಕ ತನ್ನನ್ನು ಬೀಡಿ ಕಾರ್ಮಿಕನೆಂದೇ ಗುರುತಿಸಿ ಕೊಳ್ಳುತ್ತಾನೆ. ಈ ಪರಿವರ್ತನೆ ಅವನಲ್ಲಿ ಚೈತನ್ಯ ಮತ್ತು ಉತ್ಸಾಹವನ್ನು ತುಂಬಿದೆ. ಅಜೀಜ್‌ಸೇಟ್ ನಗರಕ್ಕೆ ಶಿಲಾನ್ಯಾಸವನ್ನು ಅಂದಿನ ಪ್ರಧಾನಿ ಶ್ರೀ ರಾಜೀವ ಗಾಂಧಿಯವರೇ ನೆರವೇರಿಸಿದ್ದರು. ಅಲ್ಲಿ 1,000 ಮನೆ, ಮಸೀದಿ, ಶಾಲೆ ಎಲ್ಲವನ್ನೂ ನಿರ್ಮಿಸಲಾಗಿದೆ. ರಾಜೇಂದ್ರ ನಗರದಲ್ಲಿ 300 ಮನೆ, ಕೆ.ಆರ್.ಎಸ್. ಬಳಿ 150 ಮನೆಗಳನ್ನು ನಿರ್ಮಿಸಲಾಗಿದೆ. ಪ್ರತಿಯೊಬ್ಬರೂ ಸ್ವಯಂ ಸಾಧಿಸಲು ಅನುಕೂಲ ಕಲ್ಪಿಸಲಾಗಿದೆ.

ಪ್ರಶ್ನೆ . ಇತ್ತೀಚಿನ ದಿನಗಳಲ್ಲಿ ಚುನಾವಣೆಗೆ ಅಭ್ಯರ್ಥಿಯನ್ನು ಆರಿಸುವಾಗ ಆ ಪ್ರದೇಶದ ಜಾತಿವಾರು ಸಂಖ್ಯೆಯ ಪ್ರಶ್ನೆ ಮಾಡುತ್ತಿದೆ. ಇದರಿಂದ ನಿಜವಾಗಲೂ ಅರ್ಹನಾದ ಅಭ್ಯರ್ಥಿಗೆ ಅವಕಾಶವಾಗುವುದಿಲ್ಲವೇ ? ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಶ್ರೀ ಅಜೀಜ್‌ಸೇಟ್ : ಇದು ಸರಿಯಲ್ಲ. ಇದನ್ನು ನಾನು ಒಪ್ಪುವುದಿಲ್ಲ. ಆ ರೀತಿ ಮಾಡುವುದು ತಪ್ಪು. ಈಗ ನೋಡಿ ನನ್ನ ಕ್ಷೇತ್ರದಲ್ಲಿ ಕೇವಲ ಮುಸ್ಲಿಮರು ಮಾತ್ರವಲ್ಲ, ಇತರೇ ಜನಾಂಗದವರೂ ಇದ್ದಾರೆ. ಮಂಡಿ ಮೊಹಲ್ಲ ಅಲ್ಲದೇ ನನ್ನ ಕ್ಷೇತ್ರ ರಾಮಾನುಜ ರಸ್ತೆಯ ತನಕ ಇದೆ. ಕೃಷ್ಣರಾಜ ಕ್ಷೇತ್ರದಲ್ಲಿ ಮುಸ್ಲಿಮರು ಕಡಿಮೆ. ಚಾಮರಾಜದಲ್ಲಿ ಅಧಿಕ ಸಂಖ್ಯೆಯ ಮುಸ್ಲಿಮರಿದ್ದಾರೆ. ಆದರೆ ಅಲ್ಲಿ ಹರ್ಷಕುಮಾರ ಗೌಡ ಗೆದ್ದರು. ನನ್ನ ಕ್ಷೇತ್ರದಲ್ಲಿ ಹಿಂದೂಗಳು ಜಾಸ್ತಿ ಆದರೆ ನಾನು 6 ಬಾರಿ ಚುನಾಯಿತನಾಗಿದ್ದೇನೆ. ಈಗ ಚುನಾವಣೆಗೆ ನಿಲ್ಲುವುದಿಲ್ಲವೆಂಬುದಕ್ಕೆ ಮುಸ್ಲಿಮೇತರರೇ ಬಂದು ಒತ್ತಾಯ ಮಾಡಿ ನಿಲ್ಲಲು ಹೇಳುತ್ತಿದ್ದಾರೆ. Birth is an accident. Death is certain. ನಾವೇನು ಇಂತಹ ಜಾತಿಯಲ್ಲಿ ಹುಟ್ಟಬೇಕೆಂದು ದೇವರಲ್ಲಿ ಅರ್ಜಿ ಹಾಕಿರುವುದಿಲ್ಲ, ನಮ್ಮ ತಾಯಿ ತಂದೆಯರೂ ಹಾಕಿರುವುದಿಲ್ಲ. Accidentally ಹುಟ್ಟಿದ್ದೇವೆ. ಜಾತಿ ಒಂದು ಕಡೆ, ಧರ್ಮ ಒಂದು ಕಡೆ. ನಾವು ಧರ್ಮವನ್ನು ಬೇರೆಯಿಟ್ಟು ಜಾತಿಯನ್ನು ಮುಂದೆ ಮಾಡುತ್ತೇವೆ. ಧರ್ಮವನ್ನೇ ನೋಡಿ ಯಾವ ಧರ್ಮ ತಾನೇ ಇನ್ನೊಬ್ಬರಿಗೆ ಅನ್ಯಾಯ ಮಾಡಲು ಹೇಳುತ್ತದೆ ? ನೀವೇ ಹೇಳಿ. ಜಾತಿ ಮಾಡಬಹುದು, ಧರ್ಮ ಮಾಡುವುದಿಲ್ಲ. ನಾನು ಎಲ್ಲಾ ಸ್ವಾಮಿಗಳ ಬಳಿಯೂ ಹೋಗುತ್ತೇನೆ. ಸುತ್ತೂರು, ಸಿದ್ದಗಂಗೆ, ಮೂರುಸಾವಿರ ಮಠ ಎಲ್ಲಾ ಸ್ವಾಮಿಗಳ ಬಳಿಯೂ ಹೋಗುತ್ತೇನೆ. ಗಣಪತಿ ಸಚ್ಚಿದಾನಂದ ಸ್ವಾಮಿಗಳ ಆಶ್ರಮದಲ್ಲಿ ಹೆಚ್ಚು ಕೆಲಸ ಮಾಡುವವರು ಮುಸ್ಲಿಮರೆ. ಬಣ್ಣ ಬಳಿಯುವವರು, ಕಟ್ಟಡ ನಿರ್ಮಾಣ ಮಾಡುವವರು ಎಲ್ಲಾ ಮುಸ್ಲಿಮರೇ ಇದ್ದಾರೆ. ಜಾತಿಯ ಪ್ರಶ್ನೆಯನ್ನು ಯಾರೂ ಎತ್ತಬಾರದು. ಸಾಮಾಜಿಕ ವಲಯಗಳಲ್ಲಿ ಈ ಚರ್ಚೆ ಬರಬಾರದು. ಉದಾಹರಣೆಗೆ ರೋಟರಿ, ಲಯನ್ಸ್ ಮುಂತಾದ ಸಂಸ್ಥೆಗಳಲ್ಲಿ ಎಲ್ಲಾ ಜಾತಿಯವರೂ ಇದ್ದಾರೆ. ಅಲ್ಲಿ ಜಾತಿ ಪ್ರಶ್ನೆಯೇ ಬರುವುದಿಲ್ಲ, ಅಂತಹದ್ದು ಆಗಬೇಕು.

ಪ್ರಶ್ನೆ : ಕರ್ನಾಟಕ ಶಿಕ್ಷಣ ನೀತಿಯ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಶ್ರೀ ಅಜೀಜ್‌ಸೇಟ್ : ನಾನು ಯಾವುದೇ ಭಾಷೆಯ ವಿರೋಧಿಯಲ್ಲ. ಯಾವುದೇ ಮಗುವಿಗೆ ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲೇ ಆಗಬೇಕು. ಮಗು ಮನೆಯಲ್ಲಿ ಏನು ಮಾತನಾಡುತ್ತದೋ ಅದೇ ಭಾಷೆ ರೂಢಿಯಾಗಬೇಕು. ಐದನೇ ತರಗತಿಯ ನಂತರ ಕನ್ನಡ ಕಡ್ಡಾಯ ಮಾಡಲಿ. ನಂತರ ಪ್ರತಿ ತರಗತಿಗೂ ಕನ್ನಡ ಕಡ್ಡಾಯ ಕಲಿಕೆಯ ಬಗ್ಗೆ ಆದೇಶ ಮಾಡಲಿ. ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯ ಶಿಕ್ಷಣವೇ ಅಗತ್ಯ. ನಾನು ವೀರೇಂದ್ರ

ಪಾಟೀಲರ ಮಂತ್ರಿ ಮಂಡಲದಲ್ಲಿ ಕಾರ್ಮಿಕ ಸಚಿವನಾಗಿದ್ದಾಗ ಬರುತ್ತಿದ್ದ ಪ್ರತಿಯೊಂದು ಪತ್ರವೂ ಕನ್ನಡದಲ್ಲಿರುತ್ತಿತ್ತು. ಅದಕ್ಕೆ ಈ ಪದಾಧಿಕಾರಿಯನ್ನೋ ಇನ್ನಾರನ್ನೋ ಕರೆಸಿ ಓದಿ ತಿಳಿಯಬೇಕಾಗಿತ್ತು. ಹೀಗೆ ಬೇರೆಯವರ ಮೇಲೆ ಅವಲಂಬಿಸಲು ಇಚ್ಛೆ ಇಲ್ಲದೇ ನಾನು ಸಂಪುಟಕ್ಕೆ ರಾಜೀನಾಮೆ ನೀಡಿದೆ. ರಾಜ್ಯದಲ್ಲಿ ಉರ್ದು ದ್ವಿತೀಯ ಭಾಷೆಯಾಗಬೇಕು. ಮೈಸೂರು ಮಹಾರಾಜರ ಕಾಲದಲ್ಲಿ ಕಾಲೇಜಿನಲ್ಲಿ ಉರ್ದು ಮಾಧ್ಯಮವಿತ್ತು. ಹೈದರಾಬಾದ್‌ನಲ್ಲಿ ಉರ್ದು ದ್ವಿತೀಯ ಭಾಷೆ. ನಮ್ಮ ರಾಜ್ಯದಲ್ಲೂ ಹೆಚ್ಚು ಜನ ಮುಸ್ಲಿಮರಿದ್ದಾರೆ. ಆದ್ದರಿಂದ ಉರ್ದು ದ್ವಿತೀಯ ಭಾಷೆಯಾಗಬೇಕು. ಸಂಸ್ಕೃತ ಮತ್ತು ಉರ್ದು ಈ ಎರಡೂ ಭಾಷೆಯನ್ನು ಯಾಕೆ ದ್ವೇಷಿಸುತ್ತೀರ. ಮೈಸೂರಿನಲ್ಲಿ ಸಂಸ್ಕೃತ ಕಾಲೇಜಿದೆ. ಟಿ.ಸಿ.ಹೆಚ್. ನಲ್ಲಿ ಅರೇಬಿಕ್ ಭಾಷೆಯನ್ನು ಸಾದಾ ಭಾಷೆಯಾಗಿ ಕಲಿಸುತ್ತಾರೆ. ಕುರಾನ್ ಅರೇಬಿಕ್ ಭಾಷೆಯಲ್ಲಿದೆ. ಅದನ್ನು ಕಲಿಯಲು ಪ್ರಯತ್ನಿಸಿದರೆ ತಪ್ಪೇನು. ರಾಜ್ಯದಲ್ಲಿ ಮೂರು ಭಾಷೆಯ ಶಿಕ್ಷಣ ಅವಶ್ಯಕ. ಪ್ರತಿ ವರ್ಷವೂ ಶೈಕ್ಷಣಿಕ ವರ್ಷದ ಆರಂಭಕ್ಕೆ ಇದೇ ಪ್ರಸ್ತಾಪ ಆರಂಭವಾಗುತ್ತದೆ. ಇದೆಲ್ಲಾ ರಾಜಕೀಯ ವ್ಯಕ್ತಿಗಳಿಂದ ದೂರವಿರಬೇಕು. ಶೈಕ್ಷಣಿಕ ತಜ್ಞರು ಇದ್ದಾರೆ. ವಿಶ್ವವಿದ್ಯಾನಿಲಯಗಳು ಇವೆ. ಇದು ಹೇಗೆ ಕೆಲಸ ಮಾಡಬೇಕು ಎಂಬುದನ್ನು ಅವರೇ ನಿರ್ಧರಿಸಲಿ. ಯಾವ ಹಂತಕ್ಕೆ ಯಾವ ಭಾಷೆಯೆಂಬುದನ್ನು ಅವರೇ ಸೂಚಿಸಲಿ. ಅದರ ಬದಲು ಈ ರಾಜಕಾರಣಿಗಳಿಗೇನು ಕೆಲಸ. ವಿದ್ಯೆ ಅಭಿವೃದ್ಧಿಯ ಸೂಚಕವಾಗಿರಬೇಕು. ಕಲಿಕೆಯ ಹಂತದಲ್ಲೇ ಹೊಡೆದಾಟವಾದರೆ ಹೇಗೆ ? ವಿಶ್ವವಿದ್ಯಾನಿಲಯಗಳಿಗೆ ಅರ್ಹರಾದವರನ್ನು ನೇಮಿಸಬೇಕು. ಯಾರಾದರೂ ರಾಜಕೀಯದವರು ನೇಮಿಸಿದರೆ ಆಗುವುದೇ ಹಾಗೆ. ಹಿಂದೆ ಮೈಸೂರು ನಗರದ ಕಮೀಷನರ್ ಆಗಿ ಲಕ್ಷ್ಮಣರಾವ್ ರವರಿದ್ದರು. ಪ್ರತಿದಿನ ಕೆಲಸ ನಡೆಯುತ್ತದೋ ಇಲ್ಲವೋ ಎಂಬ ಬಗ್ಗೆ ದಿನ ಕುದುರೆಯ ಮೇಲೆ ಬಂದು ವಿಚಾರಿಸುತ್ತಿದ್ದರು. ಈಗ ಯಾರಿದ್ದಾರೆ ಅಂತಹವರು ? ಪ್ರತಿಯೊಂದು ರಾಜಕೀಯ ಮೇಲಾಟದಿಂದ ಕಟ್ಟಿದೆ. ಇದನ್ನು ಸರಿಪಡಿಸಬೇಕು.

ಪ್ರಶ್ನೆ : ಶಿಕ್ಷಣ ಕ್ಷೇತ್ರಕ್ಕೆ ನಿಮ್ಮ ಕೊಡುಗೆಯೇನು ?

**ಶ್ರೀ ಅಜೀಜ್‌ಸೇಟ್** : ಬೀಡಿ ಕಾರ್ಮಿಕರಿಗೆ ಸಂಘಟನೆ ಮಾಡುವಾಗ ಶಿಕ್ಷಣ ಕ್ಷೇತ್ರದಲ್ಲೂ ಉತ್ತಮ ಶಿಕ್ಷಣ ನೀಡಲು ಬಯಸಿದ್ದೆ. ನಮ್ಮ ತಂದೆಯವರಾದ ಶ್ರೀ ಅಬ್ದುಲ್ ಸತ್ತಾರ್ ಸೇಟ್‌ರವರು 1960ರಲ್ಲಿ ಮಜ್ಲಿಸ್-ಇ-ರಿಫಿವಾಲ್ ಮುಸ್ಲಿಮಿನ್ ಎಜುಕೇಷನಲ್ ಟ್ರಸ್ಟ್ ಆರಂಭಿಸಿದರು. 1962 ರಿಂದ ನಾನು ಅದರ ಅಧ್ಯಕ್ಷನಾಗಿದ್ದೇನೆ. ಹದಿಮೂರು ಶಿಕ್ಷಣ ವಿಭಾಗಗಳಿವೆ, 2 ಪ್ರಾಥಮಿಕ 4 ಪ್ರೌಢಶಾಲೆಗಳು, 2 ಪದವಿಪೂರ್ವ ಕಾಲೇಜು, ಒಂದು ದಂತವೈದ್ಯ ಕಾಲೇಜು, 1ಡಿ-ಫಾರ್ಮ್ ಕಾಲೇಜು, 1ಬಿ-ಫಾರ್ಮ ಕಾಲೇಜು ಮತ್ತು ವೃತ್ತಿ ಶಿಕ್ಷಣ ಕಾಲೇಜುಗಳಿವೆ. ಮಹಿಳೆಯರು ಮತ್ತು ಪುರುಷರಿಗೆ ಬೇಕಾದ ಕೋರ್ಸ್‌ಗಳ ತರಬೇತಿ ಇದೆ.

ಪ್ರಶ್ನೆ : ಮೀಸಲಾತಿ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಶ್ರೀ ಅಜೀಜ್‌ಸೇಟ್ : ಈಗ ಮೀಸಲಾತಿ ನಿಷೇಧಕ್ಕೆ ತುಂಬಾ ತಪ್ಪು ಕಾಲ. ಈಗಲೂ ಹಿಂದುಳಿದ ವರ್ಗದವರು ತುಂಬಾ ಇದ್ದಾರೆ. ಅವರಿಗೆ ಜೀವನದಲ್ಲಿ ಮುಂದುವರಿಯಲು ಮೀಸಲಾತಿ ಅವಶ್ಯಕತೆಯಿದೆ. ಅವರು ಇನ್ನೂ ತುಂಬಾ ಹೀನಾಯವಾದ ಜೀವನದಲ್ಲಿದ್ದಾರೆ, ಅವರ ಉದ್ಧಾರಕ್ಕೆ ಇದರ ಅವಶ್ಯಕತೆಯಿದೆ. ರೋಸ್ಟರ್ ಸಿಸ್ಟಮ್ ಕೂಡ ಜಾರಿಯಲ್ಲಿರಬೇಕು. ಈ ರೋಸ್ಟರ್ ಪದ್ಧತಿ ಬಂದ ನಂತರ 115 ವರ್ಷಗಳ ಇತಿಹಾಸದಲ್ಲಿ ಮೈಸೂರಿಗೆ ಒಬ್ಬ ಮುಸ್ಲಿಂ ಮೇಯರ್ ಬರಲು ಸಾಧ್ಯವಾಯಿತು. ಇದರಿಂದ ತುಂಬಾ ಅನುಕೂಲವಾಗಿದೆ. ಇದು ಜನರು ಮೇಲೆ ಬರಲು ಅನುಕೂಲ ಇದರಲ್ಲಿ ರಾಜಕೀಯ ಮಾಡಕೂಡದು.

ಪ್ರಶ್ನೆ : ಕಾವೇರಿ ಸಮಸ್ಯೆಯ ಬಗ್ಗೆ ನಿಮ್ಮ ಅನಿಸಿಕೆಯೇನು ? ಇದು ಮೈಸೂರು ನಗರಕ್ಕೆ ನೇರ ಸಂಬಂಧಪಡುತ್ತದೆ. ಇದರ ಪರಿಹಾರಕ್ಕೆ ರೂಪಿಸಿದ ಮಾರ್ಗ ಸರಿಯೆ ?

ಶ್ರೀ ಅಜೀಜ್‌ಸೇಟ್ : ಕಾವೇರಿ ಕೃಷ್ಣರಾಜ ಸಾಗರವನ್ನು ಪಕ್ಕದಲ್ಲೇ ಇರಿಸಿಕೊಂಡು ಬೋರ್‌ವೆಲ್ ನೀರು ನಾವು ಕುಡಿಯುತ್ತಿದ್ದೇವೆ. ಆದರೆ ಕಾವೇರಿ 1ನೇ ಹಂತ, 2ನೇ ಹಂತ, 3ನೇ ಹಂತ ಎಲ್ಲಾ ಬೆಂಗಳೂರಿಗೆ ಲಭ್ಯ. ನನ್ನ ಮಾವನ 1960ರಲ್ಲೇ ಕೃಷ್ಣರಾಜಸಾಗರದಿಂದ ಮೈಸೂರಿನ ಕುಡಿಯುವ ನೀರಿನ ಪೂರೈಕೆಗಾಗಿ ಒಂದು ಕಾಲುವೆ ನಿರ್ಮಿಸಲು ಆಮ್‌ಸ್ಟರ್ ಡ್ಯಾಂ ಮಾದರಿಯಲ್ಲಿ ನಿರ್ಮಿಸಲು ಸಲಹೆ ಮಾಡಿದ್ದರು. ಆದರೆ ಮಾಡಲಿಲ್ಲ. ಆದರ ಬದಲು ಕಾವೇರಿ ಮೂರು ಹಂತಗಳ ಪೂರೈಕೆ ಬೆಂಗಳೂರು ನಗರಕ್ಕೆ ಮಾಡುತ್ತಿದ್ದಾರೆ. ಸರ್.ಎಂ. ವಿಶ್ವೇಶ್ವರಯ್ಯನವರು 1924ರಲ್ಲೇ ಕೃಷ್ಣರಾಜಸಾಗರದ ನೀರಿನ ಬಗ್ಗೆ ತೀರ್ಮಾನ ಮಾಡಿದ್ದರು. ಅದನ್ನು 1974ರಲ್ಲೇ ಮುಂದುವರಿಸಿದ್ದರೆ ಈ ಸಮಸ್ಯೆ ಬರುತ್ತಿರಲಿಲ್ಲ. ಅದಕ್ಕೆ ನಮ್ಮ ರಾಜಕಾರಣಿಗಳ ಸೋಮಾರಿತನ ಕಾರಣ. ಇದರ ದುರುಪಯೋಗವನ್ನು ತಮಿಳುನಾಡಿನವರು ಬಳಸಿಕೊಂಡರು. ಕನ್ನಂಬಾಡಿ ಅಣೆಕಟ್ಟೆಗೆ ಹೋಗಿ ನೋಡಿ ನೀವು ಗೇಟ್‌ನ್ನು ಪ್ರವೇಶಿಸುವಾಗ ಬಲ ಮತ್ತು ಎಡ ಪಕ್ಕದಲ್ಲಿ ಎರಡು ಫಲಕಗಳಿವೆ. ಇದರಲ್ಲಿ ಈ ನೀರನ್ನು ಬಳಸುವ ರೈತರಿಗೆ ನಾಗರೀಕರಿಗೆ ತೆರಿಗೆ ಹಾಕಬಾರದು, ಹಾಕಿದವರು ಜ್ಯೂ, ಅಧಿಕಾರಿಯಾದರೆ ಜೆರೂಸಲೇಂನಲ್ಲಿ ಒಂಟೆ ಕೊಂದ ಪಾಪ, ಮುಸ್ಲಿಂ ಅಧಿಕಾರಿಯಾದರೆ ಮೆಕ್ಕಾದಲ್ಲಿ ಹಂದಿ ಕೊಂದ ಹಾಗೆ, ಹಿಂದೂವಾದರೆ ಕಾಶಿಯಲ್ಲಿ ಗೋಹತ್ಯೆ ಮಾಡಿದಂತೆ. ಆದರೆ ಈಗ ಮಾಡುತ್ತಿರುವುದೇನು ಪ್ರತಿ ಹಂತವೂ ತೆರಿಗೆ ಹಾಕಲಾಗುತ್ತಿದೆ. ಈ ಯಾವ ವಿಚಾರದಲ್ಲೂ ರಾಜಕೀಯ ಕೂಡದು. ಕೆಲವು ವಿಚಾರಗಳು Facts ಬಾರ್ಡರ್ ಇರಬಹುದು Line of Control ಇರಬಹುದು. ಇವುಗಳ ಬಗ್ಗೆ ರಾಜಕೀಯ ಕೂಡದು ಎಂದೇ ನನ್ನ ಅಭಿಪ್ರಾಯ.

ಪ್ರಶ್ನೆ : ಟಿಪ್ಪುಸುಲ್ತಾನ್ ದ್ವಿಶತಮಾನೋತ್ಸವ ಆಚರಣೆ ಬಗ್ಗೆ ಹೇಳುತ್ತೀರಾ ?

ಶ್ರೀ ಅಜೀಜ್‌ಸೇಟ್ : ಇದು ಉದ್ಘಾಟನೆಯಾಗಿದೆ. ಟಿಪ್ಪು ಸುಲ್ತಾನ್ ಬಗ್ಗೆ ಇರುವ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಬೇಕು. ಅವನು ಪ್ರಥಮ ಸ್ವಾತಂತ್ರ್ಯ ಹೋರಾಟಗಾರ. ಆಗಲೇ ಬ್ರಿಟಿಷರನ್ನು ದೇಶದಿಂದ ಹೊರದೂಡಲು ಪ್ರಯತ್ನಿಸಿದ, ಇಂದಿಗೂ ಶ್ರೀರಂಗಪಟ್ಟಣದಲ್ಲಿ ಹೆಚ್ಚು ಮುಸ್ಲಿಮರಿಲ್ಲ. ಕೇವಲ 400 ಕುಟುಂಬಗಳಿವೆ. ಟಿಪ್ಪುವಿನ ಬಗ್ಗೆ ಮುಸ್ಲಿಮೇತರರಿಗೆ ತುಂಬಾ ಅಭಿಮಾನವಿದೆ. ಅವನನ್ನು ಜಾತಿದೃಷ್ಟಿಯಿಂದ ನೋಡಲು ಬಾರದು. ಪ್ರಥಮ ಸ್ವಾತಂತ್ರ್ಯ ಹೋರಾಟಗಾರನೆಂಬ ಅಭಿಮಾನಬೇಕು.

## ಭಾಗ-5

## ಗಣ್ಯರ ದೃಷ್ಟಿಯಲ್ಲಿ ಅಜೀಜ್‌ಸೇಟ್

ಶ್ರೀ ಅಜೀಜ್‌ಸೇಟ್‌ರದ್ದು ಒಂದು ಶ್ರೀಮಂತ ಕುಟುಂಬ. ಈ ಶ್ರೀಮಂತ ಕುಟುಂಬದಿಂದ ಬಂದಿದ್ದರೂ, ಬಡವರ ಬಡಜನತೆಯ ಕಾರ್ಮಿಕ ವರ್ಗದವರ ನೋವಿಗೆ ದನಿಯಾಗಿ ನಿಂತವರು ಶ್ರೀ ಅಜೀಜ್‌ಸೇಟ್. ಸುಮಾರು 40ಕ್ಕೂ ಹೆಚ್ಚು ವರ್ಷಗಳಿಂದ ಅವರನ್ನು ಹತ್ತಿರದಿಂದ ಕಾಣುವ ಭಾಗ್ಯ ನನ್ನದು. ನನ್ನ ತಂದೆ ಕೆ. ಕಾಸೀಂ ಖಾನ್‌ರಿಗೆ ಕೂಡಾ ತುಂಬಾ ಆತ್ಮೀಯರು. ಅಜೀಜ್‌ಸೇಟ್ ಜನ್ಮಜಾತ ನಾಯಕತ್ವ ವಿರುವವರು. ಶೋಷಿತ ವರ್ಗಗಳ ಅದರಲ್ಲೂ, ಬೀಡಿ ಕಾರ್ಮಿಕರ ನೋವಿಗೆ ಅವರು ಪ್ರತಿನಿಧಿಯಾದರು. ಈ ಜನಗಳನ್ನು ಮೇಲೆತ್ತಲು ಶ್ರೀ ಸೇಟ್‌ರದ್ದು ಮಹತ್ವದ ಕೊಡುಗೆ. ಕೇವಲ ಕಾರ್ಮಿಕ ಸಮುದಾಯ ಮಾತ್ರವಲ್ಲ, ಮುಸ್ಲಿಂ ಜನಾಂಗದ ಒಳಿತಿಗೆ ಅವರ ದನಿಯಾದಂತವರು. ಶ್ರೀ ಅಜೀಜ್‌ಸೇಟ್ ಅವರದ್ದು ನೇರನಡೆ, ಸ್ಪಷ್ಟನುಡಿ. ಯಾವುದೇ ಕಾರಣಕ್ಕೂ ತಮ್ಮ ಆದರ್ಶಗಳೊಂದಿಗೆ ರಾಜೀ ಮಾಡಿಕೊಳ್ಳಲಿಲ್ಲ. ಈ ಸ್ಪಷ್ಟತೆಯಿಂದ ಅವರು ಜನರ ದನಿಯಾಗಲು ಅವಕಾಶವಾಯಿತು. ಇದೊಂದು ತೀರಾ ಅಪರೂಪದ ಗುಣ. ಈ ರೀತಿ ಯಾವ ರಾಜಕಾರಿಣಿಯೂ ಇರಲು ಸಾಧ್ಯವಿಲ್ಲ. ಆದರೆ ಶ್ರೀ ಸೇಟ್ ಅದನ್ನು ಉಳಿಸಿಕೊಂಡಿದ್ದಾರೆ. ಅವರನ್ನು ಜನ ಬಯಸುವುದೇ ಈ ಕಾರಣದಿಂದ. ಭ್ರಷ್ಟಾಚಾರ ರಹಿತವಾದ ಶುದ್ಧ ಜೀವನ ಅವರದ್ದು. ಅವರು ಸದಾಕಾಲ ಜನರ ಜೊತೆಗೆ ಇರಲು ಬಯಸುವ ಅಪರೂಪದ ವ್ಯಕ್ತಿ. ಎಲ್ಲಾ ಜಾತಿ ಧರ್ಮಗಳ, ಎಲ್ಲಾ ವರ್ಗಗಳ ಜನರ ಪ್ರೀತಿ-ವಿಶ್ವಾಸಗಳಿಸಿಕೊಂಡಿರುವ ಅಪರೂಪದ ವ್ಯಕ್ತಿ.

ಅವರ ವಿಶೇಷತೆಯೆಂದರೆ, ಅವರು ನಿಜವಾದ ಪ್ರತಿನಿಧಿಯ ಎಲ್ಲಾ ಗುಣಗಳನ್ನು ಒಳಗೊಂಡಿದ್ದಾರೆ. ಯಾರೇ ಸಹಾಯ ಕೇಳಿ ಬಂದರೆ ಅದಕ್ಕೆ ಸ್ಪಂದಿಸುವ ವಿಶೇಷ ಗುಣವನ್ನು ಹೊಂದಿದ್ದಾರೆ. ತಮ್ಮ ಬಳಿ ಬರುವ ಜನರ ಕಷ್ಟಗಳನ್ನು ಕೇಳಿ ಅದರ ನಿವಾರಣೆಗೆ ತಕ್ಷಣ ತಮ್ಮ ಕೈಲಾಗುವ ಪ್ರಯತ್ನ ಮಾಡುತ್ತಾರೆ. ವಿಶೇಷವಾಗಿ ಬಡಜನರ ಬಗ್ಗೆ ಅವರಿಗಿರುವ ಕಾಳಜಿ ತುಂಬಾ ಅರ್ಥಪೂರ್ಣ.

ಒಂದು ರೀತಿಯಲ್ಲಿ ಅಜೀಜ್‌ಸೇಟ್ ಮುಸಲ್ಮಾನರ ಸ್ಪಷ್ಟ ಪ್ರತಿನಿಧಿ. ಎಲ್ಲಾ ವರ್ಗದ ಜನರಿಗೂ ಹಿರಿಯಣ್ಣನಂತೆ ಇರುವ ವ್ಯಕ್ತಿತ್ವ. ಮುಸಲ್ಮಾನರ ಕಷ್ಟಕಾರ್ಪಣ್ಯಗಳು ರಾಜ್ಯದ ಗಮನ ಸೆಳೆಯುವಂತೆ ಮಾಡುವಲ್ಲಿ ಅವರ ಸಾಧನೆ ಮಹತ್ತರ. ಹಿಂದುಳಿದ ಈ

ವರ್ಗಗಳ ಶೈಕ್ಷಣಿಕ ಬೆಳವಣಿಗೆಗೆ ಇವರ ಕೊಡುಗೆ ಅಪಾರವಾದುದು ರಾಜಕೀಯವಾಗಿ ಉಳಿದ ಎಲ್ಲಾ ಶಾಸಕರಿಗೂ ಮಾದರಿ. ಇಂತಹ ಒಬ್ಬ ನೈಜ ನಾಯಕರು ನಮ್ಮೊಡನೆ ಇರುವುದು ನಮ್ಮ ಭಾಗ್ಯ.

ಶ್ರೀ ಕೆ. ರಹೆಮಾನ್ ಖಾನ್
ರಾಜ್ಯ ಸಭಾ ಸದಸ್ಯರು
ಮಾಜಿ ಸಭಾಪತಿ ವಿಧಾನ ಪರಿಷತ್

ಶ್ರೀ ಅಜೀಜ್‌ಸೇಟ್‌ರದ್ದು ಸರಳ ಸಜ್ಜನಿಕೆಯ ವ್ಯಕ್ತಿತ್ವ. ಬಡಜನತೆಗೆ ಅವರು ಸ್ಪಂದಿಸುವ ರೀತಿ ಅಪ್ರತಿಮವಾದುದು. ನಿಜವಾದ ಅರ್ಥದಲ್ಲಿ ಅವರು ಬಡಜನರ ನಾಯಕ.

ಶ್ರೀ ಎಸ್. ಬಂಗಾರಪ್ಪ
ಲೋಕ ಸಭಾ ಸದಸ್ಯರು
ಮಾಜಿ ಮುಖ್ಯಮಂತ್ರಿಗಳು

ಶ್ರೀ ಅಜೀಜ್‌ಸೇಟ್ ಕರ್ನಾಟಕ ಕಂಡ ಅತಿ ಧೀಮಂತ ಮುಸ್ಲಿಂ ರಾಜಕಾರಿಣಿ. ಜಾತಿ ಧರ್ಮಗಳನ್ನು ಮೀರಿ ಅವರು ಬೆಳೆದ ರೀತಿ ಅನನ್ಯ. ಬಡಜನತೆಯ ಕಷ್ಟ ಕಾರ್ಪಣ್ಯಗಳಿಗೆ ಅದ್ಭುತವಾಗಿ ಪ್ರತಿಕ್ರಿಯಿಸುತ್ತಿದ್ದರು. ಶಾಸನ ಸಭೆಯಲ್ಲಿ ಇಂತಹ ನಾಯಕರು ಹೆಚ್ಚು ಜನ ಬಂದರೆ ಜನತೆ ನೈಜ ಪ್ರತಿನಿಧಿಗಳನ್ನು ಕಂಡಂತೆ ಆಗುತ್ತದೆ.

ಶ್ರೀ ಹೆಚ್.ಕೆ. ಪಾಟೀಲ್
ಜಲಸಂಪನ್ಮೂಲ ಸಚಿವರು

ಶ್ರೀ ಅಜೀಜ್ ಸೇಟ್ ರವರು ದಿನಾಂಕ 28-12-2001 ರಂದು ನಿಧನ ಹೊಂದಿದ್ದು, ಆ ಕುರಿತು ದಿನಾಂಕ 21-1-2002ರಂದು, ರಾಜ್ಯದ ಉಭಯ ಸದನಗಳಲ್ಲಿ ಶ್ರೀ ಅಜೀಜ್‌ಸೇಟ್‌ರವರ ಬಗ್ಗೆ ವ್ಯಕ್ತಪಡಿಸಿದ ಶ್ರದ್ಧಾಂಜಲಿಯ ಭಾಗ

## ವಿಧಾನಸಭೆ

ವಿಧಾನಸಭೆಯ ಹಾಲಿ ಸದಸ್ಯರು, ಮಾಜಿ ಸಚಿವರು, ಮಾಜಿ ಲೋಕಸಭಾ ಸದಸ್ಯರು ಆಗಿದ್ದ ಶ್ರೀ ಅಜೀಜ್ ಸೇಟ್ ಅವರು 1921ನೇ ಇಸವಿ ಜನವರಿ 1 ರಂದು ಮೈಸೂರು ನಗರದಲ್ಲಿ ಜನಿಸಿ, ಮೈಸೂರು ಹಾಗೂ ಆಲಿಘಡದಲ್ಲಿ ವ್ಯಾಸಂಗ ಮಾಡಿದ್ದು ಸಾರ್ವಜನಿಕ ಸೇವೆಯಲ್ಲಿ ಆಸಕ್ತಿ ಹೊಂದಿ ಕಾರ್ಯನಿರ್ವಹಿಸಿದವರು. ಕಾರ್ಮಿಕ ಸಂಘಟನೆಗಳಲ್ಲಿ ಹೆಚ್ಚಿನ ಆಸಕ್ತಿ ವಹಿಸಿ, ಮೈಸೂರಿನಲ್ಲಿ ಬೀಡಿ ಕಾರ್ಮಿಕರ ಸಂಘದ ಅಧ್ಯಕ್ಷರಾಗಿ, 1953 ರಿಂದ 1962ರ ವರೆಗೆ ಮೈಸೂರು ನಗರದ ಮುನಿಸಿಪಲ್ ಕೌನ್ಸಿಲರ್ ಆಗಿ, 1960 ರಿಂದ 1966ರ ವರೆಗೆ ವಿಧಾನ ಪರಿಷತ್ ಸದಸ್ಯರಾಗಿ ಆಯ್ಕೆಯಾಗಿದ್ದರು. 1967ರಲ್ಲಿ ಮೈಸೂರಿನಿಂದ ಪಕ್ಷೇತರರಾಗಿ ವಿಧಾನಸಭೆಗೆ ಆಯ್ಕೆಯಾಗಿ, 1972ರಲ್ಲಿ ಕಾಂಗ್ರೆಸ್ ಪಕ್ಷದ ವತಿಯಿಂದ ಪುನರಾಯ್ಕೆಗೊಂಡು, ಕಾರ್ಮಿಕ, ಸಾರಿಗೆ, ಪ್ರವಾಸೋದ್ಯಮ ಮತ್ತು ವಕ್ಫ್ ಖಾತೆ ಸಚಿವರಾಗಿ ಕಾರ್ಯನಿರ್ವಹಿಸಿದರು. 1973 ರಿಂದ 1977ರ ವರೆಗೆ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದ ಶ್ರೀಯುತರು 1978ರಲ್ಲಿ ವಿಧಾನ ಸಭೆಗೆ ಆಯ್ಕೆಗೊಂಡು ಕೈಗಾರಿಕಾ ಖಾತೆ ಸಚಿವರಾಗಿ ಸೇವೆ ಸಲ್ಲಿಸಿರುತ್ತಾರೆ. 1983ರಲ್ಲಿ ಕ್ರಾಂತಿರಂಗದಿಂದ ವಿಧಾನಸಭೆಗೆ ಚುನಾಯಿತರಾಗಿ ಜುಲೈ 1984ರ ವರೆಗೆ ಕಾರ್ಮಿಕ ಮತ್ತು ವಕ್ಫ್ ಖಾತೆ ಸಚಿವರಾಗಿದ್ದರು. 1984ರಲ್ಲಿ ಧಾರವಾಡ ದಕ್ಷಿಣ ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾಗಿ ಸೇವೆ ಸಲ್ಲಿಸಿರುತ್ತಾರೆ. 1989ರಲ್ಲಿ ಒಂಭತ್ತನೇ ವಿಧಾನಸಭೆಗೆ ಮತ್ತೆ ಆಯ್ಕೆಯಾಗಿ ಕಂದಾಯ, ಸಾರಿಗೆ ಮತ್ತು ವಕ್ಫ್ ಖಾತೆ ಸಚಿವರಾಗಿ ಕಾರ್ಯನಿರ್ವಹಿಸಿದ್ದ ಶ್ರೀಯುತರು 1999ರಲ್ಲಿ ಹನ್ನೊಂದನೇ ವಿಧಾನಸಭೆಗೆ ಆಯ್ಕೆಯಾಗಿ ಪ್ರೊಟೆಮ್ ಸ್ಪೀಕರ್ ಆಗಿ ನೇಮಕಗೊಂಡು ವಿಧಾನಸಭೆಯ ಸದಸ್ಯರುಗಳಿಗೆ ಪ್ರಮಾಣ ವಚನ ಬೋಧಿಸಿದ್ದರು.

ರಾಜ್ಯದ ಅದರಲ್ಲೂ ವಿಶೇಷವಾಗಿ ಕಾರ್ಮಿಕರ ಏಳಿಗೆಗಾಗಿ ಅವಿರತವಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಅಜೀಜ್ ಸೇಟ್ ಅವರು ದಿನಾಂಕ 28-12-2001ರಂದು ನಿಧನ ಹೊಂದಿದರು.

ಎಂ.ವಿ. ವೆಂಕಟಪ್ಪ
(ವಿಧಾನ ಸಭಾಧ್ಯಕ್ಷರು)

ನನ್ನ ಆತ್ಮೀಯ ಸ್ನೇಹಿತರಾದ, ಕಳೆದ ಮೂವತ್ತು ವರ್ಷಗಳ ಕಾಲ ಒಂದಲ್ಲ ಒಂದು ರೀತಿಯಲ್ಲಿ ಕೀರ್ತಿಶೇಷರಾದಂಥ ಶ್ರೀ ಅಜೀಜ್ ಸೇಟ್‌ರವರ ಜೊತೆಯಲ್ಲಿ ಕೆಲಸ ಮಾಡತಕ್ಕಂಥ ಅವಕಾಶ ನನಗೆ ಸಿಕ್ಕಿತ್ತು. ಅವರ ಕುಟುಂಬಕ್ಕೆ ಮತ್ತು ನನಗೆ ವ್ಯಕ್ತಿಗತವಾದಂಥ, ಭಾವನಾತ್ಮಕವಾದಂಥ ಒಂದು ಸಂಬಂಧವಿತ್ತು. ಅವರ ಹಿರೀಕರು ಮೈಸೂರಿನಲ್ಲಿ ತಮ್ಮದೇ ಆದಂಥ ಒಂದು ವ್ಯಕ್ತಿತ್ವದ ಛಾಪನ್ನು ಬಿಟ್ಟು ಹೋಗಿದ್ದರು. ಸೇಟ್ ಸಾಹೇಬರು ಆ ಒಂದು ಪರಂಪರೆಯನ್ನು ಮುಂದುವರೆಸಿಕೊಂಡು ಬಂದರು. ಸಮಾಜವಾದಿಯಾಗಿ ತಮ್ಮ ಸಾರ್ವಜನಿಕ ಜೀವನಕ್ಕೆ ಪಾದಾರ್ಪಣೆ ಮಾಡಿದ್ದರೂ ಸಹ ಹಲವಾರು ಕ್ಷೇತ್ರಗಳಲ್ಲಿ ಅವರು ಕೆಲಸ ಮಾಡಿದರು.

1960ರ ದಶಕದಲ್ಲಿ ವಿಧಾನ ಪರಿಷತ್ತಿಗೆ ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದರು. ಹಾಗೆ ಚುನಾಯಿತರಾದಂಥ ಕಾಲದಲ್ಲಿ ಮಂಡ್ಯ ಜಿಲ್ಲೆಯೂ ಕೂಡ ಆ ಕ್ಷೇತ್ರದ ಒಂದು ಭಾಗವಾಗಿತ್ತು. ಆ ಸಂದರ್ಭದಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ಒಂದು ಹೊಸ ಆರ್ಥಿಕ ಮತ್ತು ಸಾಮಾಜಿಕ ಸಿದ್ಧಾಂತದ ರೂವಾರಿಗಳಾಗಿ ದೇಶದಲ್ಲಿಯೇ ಒಂದು ಹೊಸ ಆಯಾಮವನ್ನು ನಿರ್ಮಾಣ ಮಾಡಿದಂಥ ಸಂದರ್ಭದಲ್ಲಿ ನಾವೆಲ್ಲರೂ ಜೊತೆಗೂಡಿ ಶ್ರೀಮತಿ ಇಂದಿರಾಗಾಂಧಿಯವರ ನೇತೃತ್ವದಲ್ಲಿ ಈ ರಾಜ್ಯದಲ್ಲಿ ಮತ್ತು ದೇಶದಲ್ಲಿ ಒಂದು ಹೊಸ ಚಿಂತನೆಯ ಆರಾಧಕರು ನಾವಾದೆವು. 1972ನೇ ಇಸವಿಯಲ್ಲಿ ನಡೆದಂಥ ಸಾರ್ವತ್ರಿಕ ಚುನಾವಣೆಗಳಲ್ಲಿ ಕೀರ್ತಿಶೇಷರಾದಂಥ ದೇವರಾಜ ಅರಸು ಅವರ ನೇತೃತ್ವದಲ್ಲಿ ಕಾಂಗ್ರೆಸ್ ಪಕ್ಷ ಒಂದು ದೊಡ್ಡ ಬಹುಮತವನ್ನು ಪಡೆದಂಥ ಸಂದರ್ಭದಲ್ಲಿ ಶ್ರೀ ಸೇಟ್ ಸಾಹೇಬರು ಆ ಮಂತ್ರಿಮಂಡಲದಲ್ಲಿ ಸಚಿವರಾದರು. ಅವರ ಜೊತೆಯಲ್ಲಿ ಸಚಿವನಾಗಿ ಐದು ವರ್ಷಗಳ ಕಾಲ ಕೆಲಸ ಮಾಡತಕ್ಕಂಥ ಅವಕಾಶ ನನಗೆ ಸಿಕ್ಕಿತ್ತು. ಕಾರ್ಮಿಕರ ಬಗ್ಗೆ ವಿಶೇಷವಾದಂಥ ಒಲವು ಶ್ರೀ ಸೇಟ್ ಸಾಹೇಬರದಾಗಿತ್ತು. ಅದರಲ್ಲಿಯೂ ವಿಶೇಷವಾಗಿ ಮೈಸೂರಿನಲ್ಲಿ ಅತ್ಯಂತ ನಿಕೃಷ್ಟತೆಗೆ ಒಳಪಟ್ಟಂಥ ಬೀಡಿ ಕಾರ್ಮಿಕರ ಸಂಘಟನೆ ಮಾಡಲು ಶ್ರೀ ಸೇಟ್ ಸಾಹೇಬರು ಅನನ್ಯವಾದಂಥ ರೀತಿಯಲ್ಲಿ ಶ್ರಮಿಸಿದರು. ಅವರಿಗೋಸ್ಕರ ಸಹಸ್ರಾರು ಮನೆಗಳನ್ನು ನಿರ್ಮಾಣ ಮಾಡತಕ್ಕಂಥ ಒಂದು ವಿಶೇಷವಾದಂಥ ಕಾರ್ಯಕ್ರಮವನ್ನು ರೂಪಿಸಿದರು. ಆ ವಿಶೇಷವಾದಂಥ ಕಾರ್ಯಕ್ರಮ, ಯಾರು ಶ್ರಮ ಜೀವಿಗಳಾಗಿದ್ದಾರೆ. ಆ ಶ್ರಮಜೀವಿಗಳು ಬದುಕಲಿಕ್ಕೆ ಒಂದು ಹೊಸ ಆಶಾಕಿರಣವನ್ನು ಹೊತ್ತಿಸಲಿಕ್ಕೆ ಶ್ರೀ ಸೇಟ್ ಸಾಹೇಬರು ಬಹಳಮಟ್ಟಿಗೆ ಕಾರಣೀಭೂತರಾದರು. ಅವರು ಎಲ್ಲಾ ಸದನಗಳಲ್ಲಿಯೂ ಕೆಲಸ ಮಾಡಿದ್ದಾರೆ. ವಿಧಾನಪರಿಷತ್ತಿನಲ್ಲಿ, ವಿಧಾನಸಭೆಯಲ್ಲಿ ಮತ್ತು ಲೋಕಸಭೆಯಲ್ಲಿ ಕೆಲಸ ಮಾಡಿದರು. ರಾಜ್ಯಸಭೆ ಒಂದನ್ನು ಬಿಟ್ಟು ಮಿಕ್ಕ ಎಲ್ಲಾ ಪ್ರಾತಿನಿಧಿಕ ಸ್ವರೂಪದ ಸಂಸ್ಥೆಗಳ ಜೊತೆಯಲ್ಲಿ ಅವರು ತಮ್ಮ ಬಾಂಧವ್ಯವನ್ನು ಬೆಳೆಸಿಕೊಂಡಿದ್ದರು. ಶ್ರೀ ಸೇಟ್ ಅವರು ಶ್ರಮಜೀವಿ ವರ್ಗದ ಚಿಂತಕರಾಗಿದ್ದರು ಮತ್ತು ಹಲವಾರು ಸಮಯಗಳಲ್ಲಿ ಸಮಾಜದ

ಅತ್ಯಂತ ಕೆಳ ದರ್ಜೆಯ ನಿಕೃಷ್ಟತೆ, ನಿರ್ಲಕ್ಷಕ್ಕೆ ಒಳಪಟ್ಟ ಜನಾಂಗಗಳ ಬಗ್ಗೆ ಸರ್ಕಾರದ ಗಮನ ಸೆಳೆಯಲಿಕ್ಕೆ ಮತ್ತು ಸರ್ಕಾರದ ಕಾರ್ಯಕ್ರಮಗಳಲ್ಲಿ ಅವರನ್ನು ಕೇಂದ್ರ ಬಿಂದುವನ್ನಾಗಿ ಮುಂದುವರಿಸಲಿಕ್ಕೆ ಅವರು ಪ್ರಯತ್ನ ಪಟ್ಟರು. ಒಂದೆರಡು ಬಾರಿ ಅವರು ತಮ್ಮ ಸಚಿವ ಸ್ಥಾನಕ್ಕೆ ಕೂಡ ರಾಜೀನಾಮೆ ಕೊಡುವಂಥ ಪ್ರಸಂಗ ಏಕೆ ಬಂತು ಎಂದರೆ, ಅವರು ಹೊಂದಿದ್ದ ಸಾಮಾಜಿಕ ಕಾಳಜಿ ಹಾಗೂ ಅವರು ಹೊಂದಿದ್ದ ಸಾಮಾಜಿಕ ಸಿದ್ಧಾಂತಗಳಿಗೆ ತಾವು ಸೇರಿದ್ದ ಮಂತ್ರಿಮಂಡಲ ಸರಿಯಾದಂಥ ರೀತಿಯಲ್ಲಿ ಸ್ಪಂದನ ಶೀಲರಾಗಿಲ್ಲ ಎನ್ನುವ ಕೊರತೆಯಿಂದ ಅವರು ಸಚಿವ ಸ್ಥಾನಕ್ಕೆ ರಾಜೀನಾಮೆ ಕೊಟ್ಟಂಥ ಪ್ರಸಂಗಗಳನ್ನು ನಾವು ನೆನೆದುಕೊಳ್ಳಬೇಕಾಗುತ್ತದೆ. ಶ್ರೀ ಸೇಟ್ ಅವರ ನಿಧನದಿಂದ ನಮ್ಮ ಸಾರ್ವಜನಿಕ ಜೀವನ ಬಹಳ ಬಡವಾಗಿದೆ. ಶ್ರೀ ಸೇಟ್ ಅವರು ತಮ್ಮ 40 ವರ್ಷಗಳ ಒಂದು ಸೇವಾ ಕಾರ್ಯದಲ್ಲಿ ನಮ್ಮೆಲ್ಲರಿಗೆ ಬಹಳ ಸ್ಫೂರ್ತಿಯನ್ನು ತಂದುಕೊಡುತ್ತಿದ್ದಂಥ ಒಬ್ಬ ಹಿರಿಯ ರಾಜಕಾರಣಿ ಮತ್ತು ಶ್ರಮಜೀವಿ, ನಿರ್ಲಕ್ಷಕ್ಕೆ ಒಳಗಾಗಿದ್ದಂಥ ವರ್ಗಗಳ ಪ್ರತಿನಿಧಿಗಳಾಗಿದ್ದರು.

ಶ್ರೀ ಎಸ್.ಎಂ. ಕೃಷ್ಣ
(ಮುಖ್ಯ ಮಂತ್ರಿಗಳು)

ಶ್ರೀ ಅಜೀಜ್ ಸೇಟ್‌ರವರು ಕೇವಲ ಯಾವುದೇ ಒಂದು ಭಾಗಕ್ಕೆ ಸೀಮಿತವಾಗಿರಲಿಲ್ಲ. ಇಡೀ ರಾಜ್ಯದಲ್ಲಿ ಎಲ್ಲಾ ಜನರಿಗೂ ಅವರು ಚಿರಪರಿಚಿತರಾದ ವ್ಯಕ್ತಿತ್ವವನ್ನು ಹೊಂದಿದ್ದರು. ಕಾರ್ಮಿಕರ ಪರವಾಗಿ ಹೋರಾಟ ಮಾಡಿದವರು. ಅದರಲ್ಲಿಯೂ ಬೀಡಿ ಕಾರ್ಮಿಕರ ಪರವಾಗಿ ಹೋರಾಟದ ಮುಂಚೂಣಿಯಲ್ಲಿದ್ದು, ಬೀಡಿ ಕಾರ್ಮಿಕರ ನಾಯಕತ್ವವನ್ನು ತೆಗೆದುಕೊಂಡು, ಕಾರ್ಮಿಕರ ಪರವಾಗಿ ವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದವರು. ನಮ್ಮ ಧಾರವಾಡ ದಕ್ಷಿಣ ಲೋಕಸಭಾ ಕ್ಷೇತ್ರದಲ್ಲಿ ಅವರು ಸ್ಪರ್ಧಿಸಿದ್ದರು. ಅವರು ಅಲ್ಲಿಂದ ಆರಿಸಿಯೂ ಸಹ ಬಂದಿದ್ದರು. ಮೈಸೂರಿನವರು, ಧಾರವಾಡದ ಕಡೆಯಿಂದ ಆರಿಸಿ ಬಂದಿದ್ದು ಅವರ ವ್ಯಕ್ತಿತ್ವವನ್ನು ತೋರಿಸುತ್ತದೆ. ಶ್ರೀ ಅಜೀಜ್ ಸೇಟ್‌ರವರು ರಾಜಕೀಯ ರಂಗದಲ್ಲಿ ತಮ್ಮ ಇಡೀ ಆಯುಷ್ಯವನ್ನು ಕಳೆದಿದ್ದಾರೆ.

ಶ್ರೀ ಜಗದೀಶ್ ಶೆಟ್ಟರ್
(ವಿಧಾನ ಸಭೆ ವಿರೋಧ ಪಕ್ಷದ ನಾಯಕರು)

ಮಾನ್ಯ ಅಜೀಜ್ ಸೇಟ್‌ರವರು ಒಂದು ವಿಶೇಷವಾದಂಥ ವ್ಯಕ್ತಿತ್ವವನ್ನು ಹೊಂದಿದ್ದರು. ಅವರಿಗೆ ಹಿಡಿಸದೇ ಇರತಕ್ಕಂಥದ್ದನ್ನು ಯಾರಾದರೂ ಮಾಡಿದರೆ, ಅದನ್ನು ಅವರು ಸಹಿಸುತ್ತಿರಲಿಲ್ಲ. ಹಾಗೆಯೇ ನಮ್ಮ ರಾಷ್ಟ್ರದಲ್ಲಿ ಅದರಲ್ಲಿಯೂ ವಿಶೇಷವಾಗಿ ನಮ್ಮ ರಾಜ್ಯದಲ್ಲಿ ಮಾನ್ಯ ಅಜೀಜ್ ಸೇಟ್‌ರವರಂಥ ನಾಯಕತ್ವದ ಕೊರತೆ ನನಗಂತೂ ಇತ್ತೀಚಿನ ದಿನಗಳಲ್ಲಿ ಬಹಳ ಎದ್ದು ಕಾಣುತ್ತಿದೆ. ಕಾರಣ, ಹಿಂದುಗಳನ್ನು ಮುಸಲ್ಮಾನ್‌ರನ್ನು ಮತ್ತು ಕ್ರಿಶ್ಚಿಯನ್ನರನ್ನು ಸಹಿತ ಒಂದೇ ಭಾವನೆಯಿಂದ ನೋಡತಕ್ಕಂಥ ಅವರ ದೃಷ್ಟಿಕೋನ

ನಿಜವಾಗಿಯೂ ಕೂಡ ನಾವು ಮೆಚ್ಚತಕ್ಕಂಥದ್ದು. ಇವತ್ತಿನ ದಿವಸ ರಾಜಕಾರಣಕ್ಕೋಸ್ಕರ ನಾವೇನು ಒಂದು ವರ್ಗದ ಅಥವಾ ಧರ್ಮದ ಮುಖಂಡರಾಗಿ ಹೊರಹೊಮ್ಮುವುದಕ್ಕೆ ಪ್ರಯತ್ನ ಮಾಡುತ್ತೇವೆ, ಅಂಥದಕ್ಕೆ ಹೊರತಾಗಿ ಶ್ರೀಮಾನ್ ಅಜೀಜ್ ಸೇಟ್‌ರವರು ಒಬ್ಬ ಮಹಾನ್ ನಾಯಕರಾಗಿ, ಈ ರಾಜ್ಯದಲ್ಲಿ ಮೆರೆದವರು. ಹಾಗೆಯೇ ಕಾರ್ಮಿಕರಿಗೋಸ್ಕರ ಮತ್ತು ಬಡವರಿಗೋಸ್ಕರ ತಮ್ಮ ಜೀವನವನ್ನು ತೊಡಗಿಸಿಕೊಂಡಿದ್ದರು ಎನ್ನತಕ್ಕಂಥದ್ದಕ್ಕೆ ನಿದರ್ಶನ, ಅವರ ಸಾವಿನ ಸಂದರ್ಭದಲ್ಲಿ ಸೇರಿದಂಥ ಅಪಾರವಾದ ಜನಸ್ತೋಮ ಎಂದು ನಾನು ತಿಳಿದುಕೊಂಡಿದ್ದೇನೆ. ಶ್ರೀಯುತರು ಪಿಎಸ್‌ಪಿ ಮತ್ತು ಎಸ್‌ಎಸ್‌ಪಿನಲ್ಲಿ ಅಧ್ಯಕ್ಷರಾಗಿದ್ದವರು. ಈ ಸೋಷಿಯಾಲಿಸ್ಟ್‌ಗಳಿಗೆ ಒಂದು ರೆಬೆಲಿಯನ್ ಮನೋಭಾವ ಇರುತ್ತದೆ. ಪಕ್ಷ ಬಿಟ್ಟ ತಕ್ಷಣ ಅದಕ್ಕೆ ಎಕ್ಸೆಪ್‌ಷನ್ ಇರಬಹುದು. ಆದರೆ ಸೋಷಿಯಲಿಸ್ಟರಿಗೆ ಸ್ವಲ್ಪ ರೆಬೆಲಿಯನ್ ಕ್ಯಾರೆಕ್ಟರಿಸ್ಟಿಕ್ ಇದೆ. ಹಾಗೆಯೇ ಇದು ಮಾನ್ಯ ಅಜೀಜ್ ಸೇಟ್‌ರವರಲ್ಲಿಯೂ ಕೂಡ ಇತ್ತು. ಅದಕ್ಕೋಸ್ಕರವೇ ನಮ್ಮ ಕರ್ನಾಟಕ ರಾಜ್ಯದಲ್ಲಿ ಪ್ರಥಮ ಕಾಂಗ್ರೆಸೇತರ ಸರ್ಕಾರ ರಚನೆಯಾದಾಗ ಮಾನ್ಯ ಅಜೀಜ್ ಸೇಟ್‌ರವರು ಪಾತ್ರವನ್ನು ನಾವು ಮರೆಯುವುದಕ್ಕೆ ಸಾಧ್ಯವಿಲ್ಲ. ಅವರು ಕಾರ್ಮಿಕ ಇಲಾಖೆ ಮತ್ತು ವಕ್ಫ್ ಇಲಾಖೆಯ ಮಂತ್ರಿಗಳಾಗಿ ಅತ್ಯಂತ ಪ್ರೀತಿ ವಿಶ್ವಾಸದಿಂದ ಕೆಲಸ ಮಾಡಿದ್ದಾರೆ. ಮಾನ್ಯ ಅಜೀಜ್ ಸೇಟ್‌ರವರಲ್ಲಿ ಎಲ್ಲಾ ಒಳ್ಳೆಯ ಲಕ್ಷಣಗಳನ್ನು ನಾವು ಕಂಡಿದ್ದೇವೆ. ಶ್ರೀಯುತರ ಮನೋಭಾವನೆಯನ್ನು ನಾವು ಬೆಳಸಿಕೊಳ್ಳತಕ್ಕಂಥ ಅವಶ್ಯಕತೆ ಇದೆ. ಮಾನ್ಯ ಅಜೀಜ್ ಸೇಟ್‌ರವರ ಸಾವು ಲಕ್ಷಾಂತರ ಜನ ಅಭಿಮಾನಿಗಳನ್ನು ಅನಾಥ ಪ್ರಜ್ಞೆಯಿಂದ ಕಾಡುತ್ತಿದೆ.

ಶ್ರೀ ಪಿ.ಜಿ.ಆರ್. ಸಿಂಧ್ಯ
ವಿಧಾನಸಭಾ ಸದಸ್ಯರು

ರಾಜಕೀಯದಲ್ಲಿ ಜನರ ಪ್ರೀತಿ ವಿಶ್ವಾಸವನ್ನು ಗಳಿಸಿಕೊಂಡು, ಜನರ ಪ್ರೀತಿಯಿಂದ ಮೈಸೂರಿನಿಂದ ಧಾರವಾಡ ದಕ್ಷಿಣಕ್ಕೆ ಬಂದು ನಮ್ಮ ಕ್ಷೇತ್ರದ ಸಂಸತ್ ಸದಸ್ಯರಾಗಿ ಸೇವೆ ಸಲ್ಲಿಸಿದಂತಹ ಹಿರಿಯ ನಾಯಕರು ಮತ್ತು ಜಾತ್ಯಾತೀತ ವ್ಯಕ್ತಿ ಅಗಲಿದ್ದು ನಮ್ಮೆಲ್ಲರಿಗೂ ನಾಯಕತ್ವದ ಕೊರತೆ ಆಗಿದೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತೇನೆ.

ಶ್ರೀ ಬಿ.ಹೆಚ್. ಬನ್ನಿಕೋಟ್ (ಹಿರೇಕೆರೂರು)
ಶಾಸಕರು

ಶ್ರೀ ಅಜೀಜ್ ಸೇಠ್‌ರವರು ಒಂದು ಲೆಜೆಂಡರಿ, ಅದಕ್ಕೆ ಪರ್ಯಾಯವಾದಂತಹ ಕನ್ನಡ ಪದಗಳು ಸಿಕ್ಕುವುದಿಲ್ಲ. ಅವರು ರಾಜಕೀಯ ಪಕ್ಷಗಳಿಗೂ ಅತೀತವಾದ ಮನುಷ್ಯ, ಕ್ಷೇತ್ರಕ್ಕೂ ಅತೀತವಾದಂತಹ ಮನುಷ್ಯ. ಅವರು ಎಲ್ಲಿ ಚುನಾವಣೆಗೆ ನಿಲ್ಲಿಸಿದರೂ ಗೆದ್ದುಬರುತ್ತಾರೆ. ಅವರನ್ನು ಚುನಾವಣೆಗೆ ಯಾವುದಾದರೂ ಪಕ್ಷದ ಲೇಬಲ್‌ನ್ನು ಹಾಕಿದರೂ ಸಹ ಅವರು ಗೆದ್ದುಬರುತ್ತಾರೆ. ಪುರಸಭೆಯಾದರೂ ಆಯಿತು, ಸಂಸತ್ ಆದರೂ ಆಯಿತು,

ಶಾಸನ ಸಭೆಯಾದರೂ ಆಯಿತು. ಅವರು ವಿವಿಧವಾದಂತಹ ಆಕಾರ ಪ್ರಕಾರಗಳಲ್ಲಿ ಬೆಳೆದಂತಹ ಮನುಷ್ಯರಾಗಿದ್ದಾರೆ. ಅವರಿಗೆ ಕೆಲವೊಂದು ಚಟಗಳಿದ್ದವು. ಅವರು 80 ವರ್ಷದ ತನಕ ಬದುಕಿದ್ದರು ಎಂದರೆ, ಅದೇ ಒಂದು ಪವಾಡವೆಂದು ನನಗನ್ನಿಸುತ್ತದೆ. ಅವರು ಜೀವನವನ್ನು ತುಂಬಾ ಪ್ರೀತಿಯಿಂದ ಅನುಭವಿಸಿದರು, ಅಷ್ಟರಮಟ್ಟಿಗೆ ಅನುಭವಿಸುವುದಕ್ಕೆ ಯಾರ್ಯಾರಿಗೆ ಸಾಧ್ಯವಾಗುತ್ತದೆ ಎಂದು ನನಗೆ ಗೊತ್ತಿಲ್ಲ ; ಅವರಂತೂ ಅನುಭವಿಸಿದ್ದಾರೆ. ಪೆನ್ನುಗಳನ್ನು ಹಾಗೂ ಸಿಗರೇಟು ಲೈಟರ್‌ಗಳನ್ನು ಕಲೆಕ್ಟ್ ಮಾಡುವುದು ಅವರಿಗೆ ಎರಡು ದೊಡ್ಡ ದೊಡ್ಡ ಚಟಗಳಿದ್ದವು. ಅವರ ಮನೆಯಲ್ಲಿ ಸಿಗರೇಟ್ ಲೈಟರ್ ಬಗ್ಗೆ ಷೋ ರೂಂ ಇದೆ ಮತ್ತು ಪೆನ್ನುಗಳ ಷೋ ರೂಮು ಇದೆ. ಅವರು ಒಬ್ಬ ಆತ್ಯಂತ ಆತ್ಮೀಯ ಗೆಳೆಯ. ಗೆಳೆತನಕ್ಕೆ ಮತ್ತೊಂದು ಹೆಸರು ಅಜೀಜ್ ಸೇಟ್ ಸಾಹೇಬರು. ಯಾವುದನ್ನೂ ನಿರ್ದಾಕ್ಷಿಣ್ಯವಾಗಿ ಎಲ್ಲರ ಜೊತೆಗೂ ಚರ್ಚೆ ಮಾಡತಕ್ಕದ್ದು ಹಂಚಿಕೊಳ್ಳತಕ್ಕದ್ದು ಅವರಲ್ಲಿತ್ತು. ನಮ್ಮ ಅವರ ಸಂಬಂಧ ಸುಮಾರು 30-35 ವರ್ಷಗಳಿಂದ ಇತ್ತು. ಸಮಾಜವಾದಿ ವೇದಿಕೆಯಿಂದ ಅವರ ನಮ್ಮ ಪರಿಚಯ ಮತ್ತು ಅವರ ಒಡನಾಡಿಯಾಗಿ ಬೆಳೆದ ನನಗೆ ಅವರನ್ನು ಕಳೆದುಕೊಂಡಿರತಕ್ಕದ್ದು ಒಂದು ದೊಡ್ಡ ದುಃಖ ತರತಕ್ಕ ಸಂಗತಿ.

ಶ್ರೀ ಡಿ.ಬಿ. ಚಂದ್ರೇಗೌಡ
(ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು)

ಅವರು ಜಾತ್ಯಾತೀತ ಮನೋಭಾವದಿಂದ ಇಡೀ ರಾಜ್ಯದಲ್ಲಿ ಪ್ರತೀತಿಯನ್ನು ಪಡೆದಿದ್ದರು. ಅವರು ಕಾರ್ಮಿಕ ನಾಯಕರಾಗಿ ದೀರ್ಘವಾದ ಸೇವೆಯನ್ನು ಸಲ್ಲಿಸಿದ್ದಾರೆ.

ಶ್ರೀ ಬೆಲ್ಲದ್ ಚಂದ್ರಕಾಂತ್ ಗುರಪ್ಪ (ಧಾರವಾಡ)
ಶಾಸಕರು.

ಅವರು ನೇರವಾಗಿ ಮಾತನಾಡತಕ್ಕಂಥ ವ್ಯಕ್ತಿಯಾಗಿದ್ದರು. ಅವರು ನಿಜವಾದಂಥ ಬಡವರ ನಾಯಕರಾಗಿದ್ದರು. ಈ ರಾಜ್ಯದ ಯಾವುದೇ ಒಂದು ಬಡಜನತೆ ಅದು ಮುಸಲ್ಮಾನ್ ಜನಾಂಗದವರು ಇರಬಹುದು. ದಲಿತರು ಇರಬಹುದು, ಕಾರ್ಮಿಕರು ಇರಬಹುದು, ಅವರೆಲ್ಲರೂ ಅಜೀಜ್ ಸೇಟ್‌ರು ನಮ್ಮ ನಾಯಕರು ಎನ್ನತಕ್ಕಂಥಾದ್ದನ್ನು ಬಹಳ ಅಭಿಮಾನದಿಂದ ಹೇಳುತ್ತಿದ್ದರು. ಅಂದರೆ ಅವರು ಯಾವಾಗಲೂ ಬಡಜನರಿಗೋಸ್ಕರ ಹೋರಾಟ ಮಾಡಿದಂಥ ವ್ಯಕ್ತಿಯಾಗಿದ್ದರು. ಅವರಲ್ಲಿ ಮತ್ತೊಂದು ವಿಶೇಷವಾದ ಗುಣ ಏನಿತ್ತು ಎಂದರೆ ಅವರು ಬಹಳ ಸರಳ ಜೀವಿಯಾಗಿದ್ದರು. ಅವರ ನಿಧನದಿಂದಾಗಿ ದಲಿತವರ್ಗದವರಿಗೆ, ಹಿಂದುಳಿದವರ್ಗಗಳಿಗೆ ಬಹಳ ನಷ್ಟವಾಗಿದೆ.

ಶ್ರೀ ಬಿ. ಸೋಮಶೇಖರ್ (ಮಳವಳ್ಳಿ)
ವಿಧಾನ ಸಭಾ ಸದಸ್ಯರು

ಸ್ನೇಹತ್ವಕ್ಕೆ ಏನಾದರೂ ಹೆಸರು ಕೊಡಬೇಕಾಗಿದ್ದರೆ ಅದಕ್ಕೆ ಅಜೀಜ್ ಸೇಟ್ ಅವರ ಹೆಸರು ಇಡತಕ್ಕದ್ದು ಸೂಕ್ತವೆಂದು ನನ್ನ ಅನಿಸಿಕೆ. ಅವರು ಬಹಳ ಬಡವರ್ಗದ, ಸಾಮಾನ್ಯವರ್ಗದ ಜನರ ಆರಾಧ್ಯ ಮೂರ್ತಿಯಾಗಿದ್ದರು. ಕಾರಣ ಏನೆಂದರೆ, ಅವರು ಆ ವರ್ಗದ ಜನರಲ್ಲಿ ಇಟ್ಟಂಥ ಕಾಳಜಿಯಿಂದಾಗಿ ಅವರ ಜೊತೆಯಲ್ಲಿ ಮಾತನಾಡುವಾಗ ಸರಳವಾದಂಥ ಭಾಷೆಯಲ್ಲೇ ಮಾತನಾಡುತ್ತಿದ್ದರು ಮತ್ತು ಅವರದ್ದೇ ಆದ ಭಾಷೆಯಲ್ಲಿ ಸಾಮಾನ್ಯ ಜನರ ಭಾಷೆಯಲ್ಲಿ ಮಾತನಾಡುತ್ತಿದ್ದರು. ಆದ್ದರಿಂದ ಎಲ್ಲರೂ ಅವರ ಮಾತನ್ನು ಕೇಳುತ್ತಿದ್ದರು.

ಶ್ರೀ ಸಿ. ಭೈರೇಗೌಡ (ವೇಮಗಲ್)
ವಿಧಾನಸಭಾ ಸದಸ್ಯರು.

## ವಿಧಾನ ಪರಿಷತ್

ಕಾಂಗ್ರೆಸ್‌ನ ಹಿರಿಯ ನಾಯಕರು, ಮಾಜಿ ಸಚಿವರು ಹಾಗೂ ವಿಧಾನಸಭೆಯ ಹಾಲಿ ಸದಸ್ಯರು ಆಗಿದ್ದ ಶ್ರೀ ಅಜೀಜ್ ಸೇಟ್‌ರವರು ದಿನಾಂಕ: 28-12-2001ರಂದು ನಿಧನರಾಗಿರುತ್ತಾರೆ.

1921ರಲ್ಲಿ ಮೈಸೂರಿನಲ್ಲಿ ಜನಿಸಿದ ಶ್ರೀಯುತರು ವೃತ್ತಿಯಲ್ಲಿ ವ್ಯಾಪಾರಸ್ಥರಾಗಿದ್ದರು. 1952ರಲ್ಲಿ ಮೈಸೂರು ಬೀಡಿ ಕಾರ್ಮಿಕ ಸಂಘದ ಸಂಸ್ಥಾಪಕ ಅಧ್ಯಕ್ಷರಾಗಿ, 1953 ರಿಂದ 1962ರ ವರೆಗೆ ಮುನ್ಸಿಪಾಲಿಟಿ ಸದಸ್ಯರಾಗಿ, 1960 ರಿಂದ 66ರ ವರೆಗೆ ವಿಧಾನ ಪರಿಷತ್ತಿನ ಸದಸ್ಯರಾಗಿ, 1985ರಲ್ಲಿ ಲೋಕಸಭಾ ಸದಸ್ಯರಾಗಿ, 1967 ರಿಂದ 84ರ ವರೆಗೆ ಹಾಗೂ 1989 ರಿಂದ 2001ರ ವರೆಗೆ ವಿಧಾನಸಭೆಯ ಸದಸ್ಯರಾಗಿ, ಸಚಿವರಾಗಿ, ಪ್ರವಾಸೋದ್ಯಮ ಅಭಿವೃದ್ಧಿ ಮಂಡಲಿಯ ಅಧ್ಯಕ್ಷರಾಗಿ, ಸಕ್ರಿಯ ರಾಜಕಾರಣಿಯಾಗಿ ಸೇವೆ ಸಲ್ಲಿಸಿರುವುದಲ್ಲದೆ ಅಲ್ಪಸಂಖ್ಯಾತರ ಏಳಿಗೆಗಾಗಿ ಸತತವಾಗಿ ದುಡಿದ ಕೀರ್ತಿ ಇವರದಾಗಿರುತ್ತದೆ.

ಇವರ ನಿಧನದಿಂದಾಗಿ ಒಬ್ಬ ಹಿರಿಯ ರಾಜಕಾರಣಿ ಹಾಗೂ ಸಮಾಜ ಸೇವಕರನ್ನು ಕಳೆದುಕೊಂಡಂತಾಗಿದೆ.

ಶ್ರೀ ಬಿ.ಎಲ್. ಶಂಕರ್
(ಮಾನ್ಯ ಸಭಾಪತಿಯವರು)

ಶ್ರೀ ಅಜೀಜ್ ಸೇಟ್‌ರವರು ನಮ್ಮ ರಾಜ್ಯದ ಒಬ್ಬ ಅತ್ಯಂತ ಹಿರಿಯ ನಾಯಕರು. ಪ್ರಶ್ನಾತೀತ ಅಲ್ಪಸಂಖ್ಯಾತ ನಾಯಕರು, ಅಲ್ಪ ಸಂಖ್ಯಾತರರಿಗೆ ಎಲ್ಲೇ ಅನ್ಯಾಯವಾಗಲಿ ಅಜೀಜ್ ಸೇಟ್‌ರವರು ಧ್ವನಿ ಎತ್ತುವುದಕ್ಕೆ ಎಂದೂ ಎರಡನೆಯವರಾಗಲಿಲ್ಲ. ತಪ್ಪು ಇದ್ದರೆ ತಪ್ಪು ಸರಿ ಇದ್ದರೆ ಸರಿ ಎಂದು ಹೇಳುವ ನೇರ ರಾಜಕಾರಣಿಯಾಗಿದ್ದರು. ಕೇವಲ ಮತಗಳನ್ನು ಗಣನೆಗೆ ಇಟ್ಟುಕೊಂಡು ರಾಜಕಾರಣ ಮಾಡುವಂತಹ ವ್ಯಕ್ತಿತ್ವವನ್ನು ಹೊಂದಿರಲಿಲ್ಲ.

ಅಲ್ಪಸಂಖ್ಯಾತರ ಏಳಿಗೆಗಾಗಿ ಹಾಗೂ ಅವರ ಅಭಿವೃದ್ಧಿಗಾಗಿ ಸಾರಿಗೆ ಸಚಿವರಾಗಿ ಹಾಗೂ ಬೇರೆ ಬೇರೆ ಹುದ್ದೆಗಳಲ್ಲಿದ್ದಾಗ ಅವರು ಸೇವೆಯನ್ನು ಮಾಡಿದ್ದಾರೆ.

ಶ್ರೀ ಹೆಚ್.ಕೆ. ಪಾಟೀಲ್
(ಮಾನ್ಯ ಭಾರಿ ನೀರಾವರಿ ಸಚಿವರು)

ಅವರು ಬಹುಶಃ ಈ ರಾಜ್ಯ ಕಂಡಂತಹ ಅತ್ಯಂತ ಸಮರ್ಥ ಆಡಳಿತಗಾರರಾಗಿದ್ದರು. ನಾಯಕರೂ ಕೂಡ ಆಗಿದ್ದರು. ಬಹುಶಃ ಅವರಷ್ಟು ವರ್ಚಸ್ಸು ಇರತಕ್ಕಂತಹ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದಂತಹ ನಾಯಕರು ಇನ್ನೊಬ್ಬರು ಇರಲಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಶ್ರೀ ಅಜೀಜ್ ಸೇಟ್‌ರವರ ನಿಧನ ಒಂದು ದೊಡ್ಡ ಶೂನ್ಯವನ್ನು ಉಂಟು ಮಾಡಿದೆ. ಅದನ್ನು ತುಂಬತಕ್ಕಂಥದ್ದು ಅಷ್ಟೊಂದು ಸುಲಭ ಸಾಧ್ಯವಾದುದ್ದಂಥದ್ದಲ್ಲ. ಅವರಲ್ಲಿ ನಾವು ಏಕ ಕಾಲದಲ್ಲಿ ಎರಡು ಗುಣಗಳನ್ನು ನೋಡುತ್ತಿದ್ದೇವೆ. ಅವರು ಒಂದು ರೀತಿಯಲ್ಲಿ Born Aristocrat. ಅವರ ಕಾಳಜಿ ಎಲ್ಲಾ ಇದ್ದದ್ದು ಬೀಡಿ ಕಾರ್ಮಿಕರ ಬಗ್ಗೆ. ತಮ್ಮ ಜೀವನದ ಕಡೆಯವರೆಗೂ ಕೂಡ ಬೀಡಿ ಕಾರ್ಮಿಕರ ಬಗ್ಗೆ ಚಿಂತಿಸುತ್ತಿದ್ದರು ಎನ್ನುವಂಥದ್ದು ಅವರ ವ್ಯಕ್ತಿತ್ವದ ಒಂದು ದೊಡ್ಡ ವೈಶಿಷ್ಟ್ಯ.

ಶ್ರೀ ಕೆ.ಹೆಚ್. ಶ್ರೀನಿವಾಸ್
(ವಿರೋಧ ಪಕ್ಷದ ನಾಯಕರು)

ಶ್ರೀ ಅಜೀಜ್ ಸೇಟ್‌ರವರು ಎಲ್ಲರ ಜೊತೆಯಲ್ಲಿದ್ದಂತಹ ರೀತಿ ನೀತಿ ನೋಡಿ ಅದಕ್ಕೆ ತಕ್ಕಂತೆ ನಡೆದುಕೊಂಡು ಬರತಕ್ಕಂಥದ್ದು ಅದು ಸ್ವಾಭಾವಿಕವಾಗಿ ಮೈಸೂರು ಮಾತ್ರವಲ್ಲ, ಇಡೀ ಕರ್ನಾಟಕದಲ್ಲಿಯೇ ಅವರ ಹೆಸರು ಎಲ್ಲರ ಬಾಯಲ್ಲಿದ್ದಂತಹ ಒಂದು ಹಿರಿಯ ಚೇತನ ನಮ್ಮನ್ನಗಲಿ ಹೋಗಿದೆ.

ಶ್ರೀ ಡಿ.ಹೆಚ್. ಶಂಕರಮೂರ್ತಿ
(ಶಾಸಕರು)

ಅವರು ಎಲ್ಲರೊಂದಿಗೆ ಸ್ನೇಹವನ್ನು ಬೆಳಸಿಕೊಂಡಂತಹ ಒಬ್ಬ ವ್ಯಕ್ತಿ ಆಗಿದ್ದರು. ಮಾನ್ಯ ಅಜೀಜ್ ಸೇಟ್‌ರವರು ಧಾರವಾಡ ಜಿಲ್ಲೆಯಿಂದ ಲೋಕಸಭೆಗೆ ಸ್ಪರ್ಧೆ ಮಾಡಿದಂತಹ ಸಂದರ್ಭದಲ್ಲಿ ಮಾನ್ಯ ನಜೀರ್‌ಸಾಬ್ ಅವರು ಸಹ ಲೋಕಸಭೆಗೆ ಸ್ಪರ್ಧಿಸಿದ್ದರು. ಮಾನ್ಯ ನಜೀರ್ ಸಾಬ್ ಅವರ ಪರವಾಗಿ ನಾವೆಲ್ಲರೂ ಚುನಾವಣಾ ಪ್ರಚಾರ ಮಾಡುವಂತಹ ಸಂದರ್ಭದಲ್ಲಿ ಮಾನ್ಯ ನಜೀರ್‌ಸಾಬ್ ಅವರು ಪ್ರಾರ್ಥನೆ ಮಾಡುತ್ತಿರಲಿಲ್ಲ. ಆದರೆ ಅವರನ್ನು ಆಯ್ಕೆ ಮಾಡುವುದಕ್ಕೆ ಸಾಧ್ಯವಾಗಲಿಲ್ಲ. ಆದರೆ ಅಜಾತ ಶತ್ರುವಿನ ರೀತಿ ಇದ್ದಂತಹ ಮಾನ್ಯ ಅಜೀಜ್ ಸೇಟ್‌ರವರನ್ನು ಜನರು ಆಯ್ಕೆ ಮಾಡಿ ಕಳಿಸಿದರು. ಆದರೆ, ಅಜೀಜ್ ಸೇಟ್‌ರವರು ಮಾನ್ಯ ನಜೀರ್ ಸಾಬ್ ಅವರ ಬಗ್ಗೆ ಅಷ್ಟೇ ಗೌರವವನ್ನು ಇಟ್ಟಿಕೊಂಡಿದ್ದರು.

ಶ್ರೀ ಎಂ.ಪಿ. ಪ್ರಕಾಶ್
(ಶಾಸಕರು)

# ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ
## (2001-2002)

ಶ್ರೀಯುತರುಗಳಾದ

| | |
|---|---|
| 1. ಬಿ.ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. ಗುತ್ತೇದಾರ್ ಸುಭಾಷ್ ರುಕ್ಮಯ್ಯ<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. ಬೆಲ್ಲದ್ ಚಂದ್ರಕಾಂತ ಗುರಪ್ಪ<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. ಕೆ.ಎನ್. ಸುಬ್ಬಾರೆಡ್ಡಿ,<br>ವಿಧಾನಸಭಾ ಸದಸ್ಯರು | ಸದಸ್ಯರು |
| 5. ಉಮೇಶ್ ವಿ. ಕತ್ತಿ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 6. ಡಾ॥ ಎಲ್. ಹನುಮಂತಯ್ಯ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 7. ಕೆ. ನಿರಂಜನ ನಾಯ್ಡು<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 8. ಶ್ರೀಮತಿ ನಿರ್ಮಲ ವೆಂಕಟೇಶ್<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| * 9. ಡಾ॥ ಎಂ.ಪಿ. ನಾಡಗೌಡ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| * 10. ರಾಮಚಂದ್ರಗೌಡ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| * 11. ಎಂ.ಎಸ್. ಸಿದ್ದರಾಜು<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

* (ದಿನಾಂಕ 30.4.02 ರಿಂದ ಸಮಿತಿ ಸದಸ್ಯರಾಗಿ ನೇಮಕಗೊಂಡಿರುತ್ತಾರೆ)

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹಮಾಲಿಕೆ
## ಸಂಪಾದಕ ವರ್ಗ

ಶ್ರೀಯುತರುಗಳಾದ :

1. ಟಿ. ರಾಜಣ್ಣ
   ಕಾರ್ಯದರ್ಶಿ

2. ಎಸ್.ಬಿ. ಪಾಟೀಲ್
   ಅಪರ ಕಾರ್ಯದರ್ಶಿ

3. ಟಿ.ಎನ್. ಧ್ರುವಕುಮಾರ್
   ಜಂಟಿ ಕಾರ್ಯದರ್ಶಿ

4. ಡಾ॥ ಎಸ್. ಚಂದ್ರಪ್ಪ
   ಸಂಶೋಧನಾಧಿಕಾರಿ

5. ಎಂ.ಕೆ. ವಿಶಾಲಾಕ್ಷಿ
   ಶಾಖಾಧಿಕಾರಿ

# ಈ ಸಚಿವಾಲಯದ ಪ್ರಕಟಣೆಗಳು

| ಕ್ರ ಸಂ. | ರಚಿತ ಪುಸ್ತಕಗಳು | ದರ ರೂ. |
|---|---|---|
| 1. | ಕೆ. ಹನುಮಂತಯ್ಯ | 20-00 |
| 2. | ಎಸ್. ನಿಜಲಿಂಗಪ್ಪ | 15-00 |
| 3. | ಶಾಂತವೇರಿ ಗೋಪಾಲಗೌಡ | 15-00 |
| 4. | ವೈಕುಂಠ ಬಾಳಿಗಾ | 20-00 |
| 5. | ವೀರೇಂದ್ರ ಪಾಟೀಲ್ | 20-00 |
| 6. | ಕಡಿದಾಳ್ ಮಂಜಪ್ಪ | 15-00 |
| 7. | ಜಿ.ವಿ. ಹಳ್ಳಿಕೇರಿ | 15-00 |
| 8. | ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 15-00 |
| 9. | ಡಿ. ದೇವರಾಜ ಅರಸು | 15-00 |
| 10. | ಕೆ.ಟಿ.ಭಾಷ್ಯಂ | 15-00 |
| 11. | ಟಿ. ಸಿದ್ದಲಿಂಗಯ್ಯ | 20-00 |
| 12. | ಕೆ. ಪುಟ್ಟಸ್ವಾಮಿ | 15-00 |
| 13. | ಜಗಳೂರು ಇಮಾಂ | 15-00 |
| 14. | ಕೆ.ಸಿ. ರೆಡ್ಡಿ | 20-00 |
| 15. | ಬಿ.ವಿ. ಕಕ್ಕಿಲಾಯ | 20-00 |
| 16. | ಹೆಚ್.ಎಂ. ಚನ್ನಬಸಪ್ಪ | 20-00 |
| 17. | ಬಿ. ರಾಚಯ್ಯ | 20-00 |
| 18. | ಜೆ.ಬಿ. ಮಲ್ಲಾರಾಧ್ಯ | 15-00 |
| 19. | ಎಂ. ನಾಗಪ್ಪ | 15-00 |
| 20. | ಗಂಗಾಧರ ನಮೋಶಿ | 15-00 |
| | **ಭಾಷಾಂತರ ಪುಸ್ತಕಗಳು** | |
| 1. | ಡಾ॥ ಬಿ.ಆರ್. ಅಂಬೇಡ್ಕರ್ | 20-00 |
| 2. | ಡಾ॥ ರಾಮಮನೋಹರ ಲೋಹಿಯಾ | 15-00 |
| 3. | ವಿ.ಕೆ. ಕೃಷ್ಣಮೆನನ್ | 20-00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | 20-00 |
| 5. | ಶೇಖ್ ಮಹಮದ್ ಅಬ್ದುಲ್ಲಾ | 15-00 |
| 6. | ಡಾ॥ ರಾಜೇಂದ್ರ ಪ್ರಸಾದ್ | 20-00 |
| 7. | ಭೂಪೇಶ್ ಗುಪ್ತ | 20-00 |
| 8. | ಅನಂತಶಯನಂ ಅಯ್ಯಂಗಾರ್ | 20-00 |
| 9. | ಶ್ರೀಮತಿ ರಾಜಕುಮಾರಿ ಅಮೃತ್‌ಕೌರ್ | 20-00 |
| 10. | ಡಾ॥ ಚಿಂತಾಮಣಿ ಡಿ. ದೇಶ್‌ಮುಖ್ | 20-00 |
| 11. | ಪನಂಪಲ್ಲಿ ಗೋವಿಂದ ಮೆನನ್ | 15-00 |
| 12. | ಜೈಸುಖಲಾಲ್ ಹಾಥಿ | 15-00 |
| 13. | ಎಸ್.ಎಂ. ಜೋಷಿ | 15-00 |

ಮುದ್ರಕರು:- ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳು, ಸಶಾಮು.ತುಮಕೂರು, ಕಾಸೂ. 193 - 2,000 ಪ್ರತಿಗಳು ದಿ: 20-02-2003.

